# ದೂರ ಹೋದಳು





ಭಾರತೀಸುತ

# ದೂರ ಹೋದಳು

( ಒಂದು ನೀಳ್ಗತೆ )

ಕತೆಗಾರರು:

' ಭಾರತೀ ಸುತ '

ಪ್ರಕಾಶಕರು:

**ಎಂ. ಕೆ. ಜಿನಚಂದ್ರ ಗೌಡರು.**

**ವಿಜಯ ಮಂದಿರಂ**

ಕಲ್ಪಟ್ಟ ( ವೈನಾಡು )

# ಮೊದಲ ಮಾತುಗಳು

ಈ ಕತೆಯನ್ನು ಬರೆಯಲು ಹೊರಟಾಗ, ಅದನ್ನು ಇಷ್ಟು ಬೇಗನೆ ಅಚ್ಚು ಹಾಕಿಸಿ ಓದುಗರ ಮುಂದೆ ಇಡಲು ಸಾಧ್ಯವಾಗುವುದೆಂದು ನಾನು ವಿಚಾರಿಸಿರಲಿಲ್ಲ. ನಾನು ಅದನ್ನು ಬರೆದಾದಮೇಲೆ ನನ್ನ ಕೆಲವು ಮಂದಿ ಗೆಳೆಯರಿಗೆ ಓದಿಹೇಳಿದೆನು. ಅವರು 'ಕತೆಯನ್ನು ಅಚ್ಚು ಹಾಕಿಸು' ಎಂದು ನನ್ನನ್ನು ಪ್ರೋತ್ಸಾಹಿಸಿದರು. ಒಬ್ಬ ಶ್ರೀಮಂತ ಕನ್ನಡಿಗರು ಪುಸ್ತಕಮುದ್ರಣದ ವೆಚ್ಚವನ್ನು ವಹಿಸುವುದಾಗಿ ಭರವಸೆಯನ್ನು ನೀಡಿದರು. ಈ ಗೆಳೆಯರ ಸಾಹಾಯ–ಸಲಕಣೆಗಳ ಫಲವಾಗಿದೆ ಈ ಪುಸ್ತಕದ ಪ್ರಕಾಶನವು.

ನನ್ನ ಅಪೇಕ್ಷೆಯನ್ನು ಸ್ವೀಕರಿಸಿ, ಪ್ರೀತಿಯಿಂದ ಮುನ್ನುಡಿಯನ್ನು ಬರೆದುಕೊಟ್ಟ ಶ್ರೀ. ಬೆಟಗೇರಿ ಕೃಷ್ಣಶರ್ಮರಿಗೆ ನಾನು ಕೃತಜ್ಞನಿರುತ್ತೇನೆ. ಪುಸ್ತಕವನ್ನು ಅಚ್ಚುಕಟ್ಟಾಗಿ ಸಕಾಲದಲ್ಲಿ ಮುದ್ರಿಸಿಕೊಟ್ಟುದುದಕ್ಕೆ ಸಾಧನ ಪ್ರೆಸ್ಸಿನ ಶ್ರೀ. ಶೇಷರಾಯರಿಗೂ ನಾನು ಋಣಿಯಾಗಿದ್ದೇನೆ.

ಕೊನೆಯದಾಗಿ ಈ ಪುಸ್ತಕದ ಮುದ್ರಣದ ವೆಚ್ಚವನ್ನು ವಹಿಸಿ,– ಈ ಪುಸ್ತಕಪ್ರಕಾಶನದ ಕೆಲಸವನ್ನು ಕೈಗೊಂಡುದುದಕ್ಕೆ ಶ್ರೀ. ಮಣಿಯಂಗೂಡು ಜಿನಚಂದ್ರ ಗೌಡರಿಗೂ ನಾನು ಕೃತಜ್ಞನಾಗಿದ್ದೇನೆ.

ಪಾದ್ರಿಪಪ್ಪಾರ (ವೈನಾಡು)
೭—೨—೪೦

'ಭಾರತೀಸುತ'

# ಮುನ್ನುಡಿ

ಶ್ರೀಮಾನ್ 'ಭಾರತೀಸುತ' ರು ನನಗೆ ಚೆನ್ನಾಗಿ ಪರಿಚಿತ ರಷ್ಟೆ ಅಲ್ಲ; ತಮ್ಮಲ್ಲಿರುವ ಕನ್ನಡದ ಪ್ರೀತಿಯ ಮೂಲಕ ಸಲುಗೆಯ ಸ್ನೇಹಿತರೂ ಆಗಿರುವರು. ಬಹಳ ದಿನಗಳ ಹಿಂದೆಯೆ, ತಾವೊಂದು ನಿಡುಗತೆ ಬರೆದಿರುವುದಾಗಿಯೂ, ಅದಕ್ಕೆ ನಾನು ಮುನ್ನುಡಿ ಬರೆಯಬೇಕಾಗಿಯೂ ಹೇಳಿದ್ದರು. ನನ್ನ ವಿಷಯದಲ್ಲಿ ಅವರು ಇಟ್ಟು ಕೊಂಡಿದ್ದ ಸೋದರಭಾವದ ಮಮತೆಯನ್ನು ಕಂಡು 'ಆಗಲಿ' ಎಂದು ನಾನೂ ಒಪ್ಪಿದ್ದೆನು. 'ಭಾರತೀಸುತ' ರು ಈ ಮೊದಲೆ ೩-೪ ಪುಸ್ತಕ ಗಳನ್ನು ಬರೆದು ಕನ್ನಡಿಗರಿಗೆ ಪರಿಚಯದವರಾಗಿಯೆ ಇದ್ದಾರೆ. ಇವರ 'ಅಮಾತ್ಯಸಂದಿಸಿ' 'ನನ್ನ ಅತ್ತಿಗೆ' ಕಾದಂಬರಿಗಳನ್ನೂ, ಅಲ್ಲಲ್ಲಿ ಪತ್ರಿಕೆಗಳಲ್ಲಿ ಬರುವ ಸಣ್ಣಕತೆಗಳನ್ನೂ ಓದಿದವರಿಗೆ ಇವರ ಕತೆಗಾರಿಕೆಯ ಹದವೂ ಭಾಷೆಯ ಬಗೆಯೂ ಚೆನ್ನಾಗಿ ತಿಳಿದಿರಬಹು ದಾಗಿದೆ. ಮುನ್ನುಡಿ ಬರೆಯಬೇಕಾದುದು-ಹಲವು ಸಲ-ಹೊಸ ಲೇಖಕರ ಕೃತಿಯ ಸವಿಯನ್ನು ವಾಚಕವರ್ಗಕ್ಕೆ ಸರಿಯಾಗಿ ತೋರಿಸಿಕೊಟ್ಟು, ಅವರನ್ನು ಗುರುತುಮಾಡಿಕೊಡುವುದಕ್ಕಿರು ವುದು. ನಾನೀಗ ಬರೆಯಬೇಕಾದ ಮುನ್ನುಡಿ ಆ ಕೆಲಸಕ್ಕೇನೂ ಬೇಕಾಗಿಲ್ಲವೆಂದು ನನ್ನ ಎಣಿಕೆ. ನಮ್ಮ ನಮ್ಮ ಜನರು ಆಡುವ ಒಳ್ಳೆಯ ಮಾತುಗಳನ್ನು ಕೇಳಬೇಕೆಂಬ ಆತ್ಮೀಯಭಾವದ ಅಪೇಕ್ಷೆ ಯಿಂದ ಮುನ್ನುಡಿ ಬರೆಯಿಸುವ ರೀತಿಯೂ ಕೆಲವು ಲೇಖಕರಿಗೆ ಇಷ್ಟವಾಗಿರುವುದು. ನನ್ನ ಮಿತ್ರರಾದ ಭಾರತೀಸುತರು ಈ ಅಪೇಕ್ಷೆ ಯಿಂದಲೆ ನನಗೆ ಮುನ್ನುಡಿ ಬರೆಯಲು ಹೇಳಿರಬಹುದು. ಈ ಕಲ್ಪನೆ ಯಿಂದಲೆ ನಾನೀಗ ಈ ಚಿಕ್ಕ ಮುನ್ನುಡಿ ಬರೆಯುತ್ತಿರುವೆನು.

ನಮ್ಮ ಭಾರತೀಯ ಸಮಾಜ ಪದ್ಧತಿಯಲ್ಲಿ ದಿನದಿನಕ್ಕೂ ಹೊಸ ಹೊಸ ಸಮಸ್ಯೆಗಳು ಎದ್ದು ನಿಲ್ಲುತ್ತಲಿವೆ. ಹೊರನೋಟಕ್ಕೆ ಸಮಸ್ಯೆ

ಗಳು ಹಲವಾಗಿ ಕಂಡರೂ ಮೂಲವನ್ನು ಹುಡುಕಲು ಹೊರಟಾಗ ಅವುಗಳ ಹುಟ್ಟು ಒಂದೇ ಒಂದು ಎಡೆಯಲ್ಲಿಯೆ ಎಂಬುದನ್ನು ಬಲ್ಲವರು ಕಂಡುಹಿಡಿಯಬಹುದು. ಲೋಕದಲ್ಲಿಯ ಪ್ರತಿಯೊಂದು ವ್ಯಕ್ತಿಯೂ ಅಪೇಕ್ಷಿಸುವುದು ಸುಖಜೀವನವನ್ನು; ಅದಕ್ಕಾಗಿ ಸಂಪೂರ್ಣ ಸ್ವಾತಂತ್ರ್ಯವನ್ನು. ತಾನು ಬಯಸಿದಾಗ ಬಯಸಿದಂತಹ ಆಹಾರ ತನಗೆ ದೊರೆಯಬೇಕು; ತಾನು ಒಲಿದು ಮೆಚ್ಚಿದ ಜೀವ ತನ್ನ ಒಡನಾಡಿಯಾಗಬೇಕು....ಎಂದು ಪ್ರತಿಯೊಂದು ಹೆಣ್ಣೂ ಪ್ರತಿಯೊಂದು ಗಂಡೂ ಅಪೇಕ್ಷಿಸುತ್ತಿರುವುದು. ಇಂತಹ ಅಪೇಕ್ಷೆಗಳನ್ನು ಅಧಿಕ ಸಂಪತ್ತು, ಅಧಿಕ ಸಾಮರ್ಥ್ಯ, ರಾಜನಶಾಸನ, ಸಮಾಜಶಾಸನ ಇವು ಎದುರಿಸತೊಡಗುವುವು. ಆಗ ವ್ಯಕ್ತಿಗಳ ಎದೆಯು ಹಲವುವಿಧದ ಕುದಿತಕ್ಕೆ ಎಡೆಯಾಗುವುವು. ಈ ಕುದಿತದಿಂದ ಹೊರಟ ಬಿಸಿಯುಸಿರುಗಳೆ ಹಲವು ಸಮಸ್ಯೆಗಳ ರೂಪಗಳನ್ನು ತಾಳಿ ಹೊಸಕಾಲವನ್ನು ಎಳೆದುತರುವುವು. ಹೊಸಕಾಲವು ಆ ಸಮಸ್ಯೆಗಳನ್ನು ಬಿಡಿಸಲಿಕ್ಕೆ ದೇಶದಲ್ಲಿಯ ಬುದ್ಧಿವಂತರಿಗೆ ಆಹ್ವಾನಮಾಡುತ್ತ ಮುಂದುವರಿಯತೊಡಗುವುದು. ಬಯಸಿದಾಗ ಬಯಸಿದಂತಹ ಆಹಾರಸಿಗುವುದಕ್ಕೆ ನಮ್ಮಲ್ಲಿಯ ಆರ್ಥಿಕ ಪರಿಸ್ಥಿತಿ ತಡೆಯೊಡ್ಡುತ್ತಲಿದೆ; ಬಯಸಿದ ವ್ಯಕ್ತಿಯನ್ನು ಒಡನಾಡಿಯಾಗಿಸಿಕೊಳ್ಳುವುದಕ್ಕೆ ಮದುವೆಯ ವಿಷಯದಲ್ಲಿರುವ ನಮ್ಮಲ್ಲಿಯ ಸಾಮಾಜಿಕ ಕಟ್ಟುನಿಟ್ಟುಗಳು ತೊಡಕನ್ನು ಹರಡುತ್ತಲಿವೆ. ಈ ತಡೆ-ತೊಡಕುಗಳಿಂದ ಸ್ವತಂತ್ರರಾಗುವ ಹವಣಿಕೆ ಇಂದು ಪೂರ್ವ-ಪಶ್ಚಿಮ ಗೋಲಾರ್ಧದ ಪ್ರತಿಯೊಂದು ಜನಾಂಗದಲ್ಲಿಯೂ ನಡೆದುದನ್ನು ನಾವು ಪ್ರತ್ಯಕ್ಷವಾಗಿ ಕಾಣುತ್ತಿದ್ದೇವೆ. ಭಾರತದಲ್ಲಿಯ ಜಾತಿಪಂಥಗಳ ಸಮಸ್ಯೆಯೂ ರಾಜಕೀಯ ಪರಾಧೀನತೆಯೂ ಈ ತಡೆ-ತೊಡಕುಗಳನ್ನು ಮಿಕ್ಕದೇಶಗಳಿಗಿಂತಲೂ ತೀಕ್ಷ್ಣವಾದುವುಗಳನ್ನಾಗಿಸಿವೆ.ಆದುದರಿಂದಲೆ ಇಂದು ನಮ್ಮಲ್ಲಿಯ ವಿಚಾರಿಗಳಾದ ಹಿರಿಯರೂ, ಕಿರಿಯರೂ, ಹೆಂಗುಸರೂ, ಗಂಡಸರೂ ಈ ತಡೆ-ತೊಡಕುಗಳನ್ನು ಕುರಿತು ಅರೆದಾಟ ನಡೆಯಿಸಿದ್ದಾರೆ. ಇವುಗಳನ್ನೆ ಕುರಿತು ಕವಿಗಳು ಕವನ ಹೆಣೆಯುತ್ತ

ಲಿದ್ದಾರೆ; ಕತೆಗಾರರು ಕತೆ–ಕಾದಂಬರಿ ಬರೆಯುತ್ತಲಿದ್ದಾರೆ. ಲೇಖಕರು ಪ್ರಬಂಧ–ನಿಬಂಧಗಳನ್ನು ಬರೆಯುತ್ತಲಿದ್ದಾರೆ. ಶ್ರೀ. 'ಭಾರತೀಸುತ'ರ ಈ ನಿಡುಗತೆಯೂ ಇದೇ ವಿಚಾರವನ್ನು ಒಳಗೊಂಡುದಾಗಿರುತ್ತದೆ.

ಬ್ರಾಹ್ಮಣಕುಲದಲ್ಲಿ ಹುಟ್ಟಿದ **ಬಾಲ**ನೆಂಬ ತರುಣ, ಸದ್ಗುಣಿಯೂ ಸುಂದರಿಯೂ, ಸಹೃದಯಳೂ ಆದ **ಲಿಲ್ಲಿ**ಯೆಂಬ ಕ್ರೈಸ್ತಜಾತಿಯ ಹೆಣ್ಣನ್ನು ಮೆಚ್ಚಿ ತನ್ನ ಒಲವನ್ನಾಕೆಗೆ ಕೊಟ್ಟ. ಆಕೆಯೂ ತುಂಬ ಮೆಚ್ಚಿಕೆಯಿಂದ ಅದನ್ನು ಪುರಸ್ಕರಿಸಿದಳು; ಪ್ರತಿಯಾಗಿ ತನ್ನ ಪ್ರೇಮಮಯ ಹೃದಯವನ್ನೂ ಒಪ್ಪಿಸಿದಳು. ಇಬ್ಬರ ಪ್ರೀತಿಯ ಅಮೃತಪ್ರವಾಹವು ಸಂಗಮಗೊಂಡು ಹರಿಯಬೇಕೆನ್ನುವಷ್ಟರಲ್ಲಿ ಬಾಲನ ತಾಯಿಯ ಬ್ರಾಹ್ಮಣ್ಯಸಂರಕ್ಷಣಾಪೇಕ್ಷೆಯ ಭಾವನೆಯ ಒಲವಾದ ಒಡ್ಡು ಅಡ್ಡವಾಯಿತು. ಬಾಲ–ಲಿಲ್ಲಿಯರ ಪ್ರೀತಿಯ ಅಮೃತಪ್ರವಾಹಗಳು ಅವರ ಹೃದಯವನ್ನು ಸುಡುವ ಅಗ್ನಿರಸಪ್ರವಾಹಗಳಾಗಿ ಪರಿಣಮಿಸಿದುವು. ಬಾಲನ ತಾಯಿ ಕೂಡ ಸ್ವೇಚ್ಛೆಯಿಂದ ಹಾಗೆ ತನ್ನ ಭಾವನೆಯ ಒಡ್ಡು ಹಾಕಿದವಳಲ್ಲ; ಸಮಾಜ ಶಾಸನ ಅನಿವಾರ್ಯವಾಗಿ ಹಾಗೆ ಮಾಡಲು ಹಚ್ಚಿ, ಮಗನ ಜೀವನ ನಾಟಕವನ್ನು ವಿಷಾದಾಂತವಾಗಿಸಿಬಿಟ್ಟಿತು. ಬಾಲನ ಮತ್ತು ಲಿಲ್ಲಿಯ ದುಃಖಮಯ ಹೃದಯಗಳಂತಹ ಹೃದಯಗಳನ್ನು ನಮ್ಮ ಸಮಾಜಶಾಶನಗಳು ಈಗ ಎಷ್ಟೆಷ್ಟು ನಿರ್ಮಿಸಿ ಇಟ್ಟಿವೆಯೊ ಯಾರು ಹೇಳಬಲ್ಲರು? ಇಂತಹ ದುಃಖಮಯ ಹೃದಯವುಳ್ಳವರಿಂದ ನಾಡಿನ ಏಳಿಗೆಗೆ ಪರಿಪೋಷಕವಾಗುವಂತಹ ಪೌರುಷವೇನಾದರೂ ಆಗುವ ಸಂಭವವಿದೆಯೆ? 'ತಾನೆ ಕಾಣದ ಪಾಪಿ ಪರರಿಗೇನ ಕೊಟ್ಟೀತು?'

ಭಾರತೀಸುತರು ನಮ್ಮಲ್ಲಿಯ ದಾಂಪತ್ಯ ಸಮಸ್ಯೆಗಳಲ್ಲಿಯ ಒಂದನ್ನು ಇಲ್ಲಿಯ ತಮ್ಮ ನಿಡುಗತೆಯಲ್ಲಿ ಚಿಡಿಸಿತೋರಿಸಬೇಕೆಂದು ಪ್ರಯತ್ನಿ

ಸಿದ್ದಾರೆ. ತರುಣಲೇಖಕರಾದ ಅವರು, ಇದಕ್ಕೂ ಒಳ್ಳೆಯ ಕೃತಿಗಳನ್ನು ರಚಿಸುವುದಕ್ಕೆ ಆವಶ್ಯಕವಾದ ವ್ಯವಸಾಯವನ್ನು ಕೈಕೊಂಡು ಮುಂದುವರಿಯುವವರಲ್ಲದೆ, ಇದರಲ್ಲಿಯೇ ತಮ್ಮ ಕಲಾಪೂರ್ಣತೆಯನ್ನು ಕಾಣಬೇಕೆನ್ನುವ ಹಟವಾದಿಗಳಲ್ಲವೆಂಬುದನ್ನು ನಾನು ಬಲ್ಲೆ. ಈ ನನ್ನ ತರುಣಮಿತ್ರರು ತಮ್ಮ ಅಭ್ಯಾಸಪೂರ್ಣವಾದ ಬುದ್ಧಿ–ಅನುಭವಗಳಿಂದ ಇದಕ್ಕೂ ಒಳ್ಳೆಯ ಕೃತಿಗಳನ್ನು ನಿರ್ಮಿಸಿ ಕನ್ನಡ ಶಾರದೆಯ ಸಿರಿಯನ್ನು ಹೆಚ್ಚಿಸಲಿ!

ಧಾರವಾಡ
೨೮–೧–೪೦

**ಬೆಟಗೇರಿ ಕೃಷ್ಣಶರ್ಮ**



# ದೂರ ಹೋದಳು

## ೧

"ಲಿಲ್ಲೀ!"

ಅವಳು ಕಣ್ಣೆತ್ತಿ ನೋಡಿದಳು. ಅವನು ಅವಳ ಮುಂದೆ ನಿಂತಿದ್ದ. ಕೈಯಲ್ಲಿ ಗುಲಾಬೀ ಹೂಗಳ ಗೊಂಚಲೊಂದು; ಅವನ ತುಟಿಗಳ ಮೇಲೆ ಒಂದು ಮೃದು ಹಾಸ.

ಕಣ್ಣುಗಳನ್ನು ಅರಳಿಸಿದಳವಳು; ಮುದ್ದಾದ ಹೂಗಳು! ನಗುತ್ತಿರುವ ಕುಸುಮಗಳು! ಮಾತಾಡಲಿಲ್ಲ; ಹೂಗಳನ್ನು ನೋಡಿದಳು. ಅವನ ಮೋರೆಯ ಕಡೆಯ ಕಣ್ಣುಗಳನ್ನು ಓಡಿಸಿದಳು. ಎರಡು ದೃಷ್ಟಿಗಳು ಒಂದುಗೂಡಿದುವು.

'ಲಿಲ್ಲೀ,' ಅವನ ಕೊರಳಿಂದ ಸ್ವರವು ಹೊರಟಿತು. 'ನಿನಗಾಗಿ ಈ ಚೆಲುವು ಹೂಗಳನ್ನು ತಂದಿರುವೆ.'

ಅವಳು ಕೈ ಚಾಚಿದಳು; ಅವನು ಹೂಗಳನ್ನು ನೀಡಿದ. ಅವನ ಎದೆಯಲ್ಲಿ ಗುಲಾಬಿ ಹೂವಿನಂತಿರುವ ಅವಳ ಕಪೋಲವನ್ನು ಚುಂಬಿಸಬೇಕೆಂಬ ಬಯಕೆ ಹುಟ್ಟಿರಬಹುದು.

ಇಬ್ಬರೂ ನುಡಿಯಾಡಲಿಲ್ಲ. ಅವಳು ಹೂಗಳ ಚೆಲುವನ್ನು ನೋಡಿ ಸವಿಯತೊಡಗಿದಳು. ಅವಳ ಮೋರೆಯ ಚೆಲುವನ್ನು ನೋಡಿ ಅದರಿಂದ ಅವನು ತನ್ನ ಎದೆಯನ್ನು ತುಂಬಿದ. ಹೂಗಳನ್ನು ನೋಡುವುದರಿಂದ ಅವಳ ಮೊಗವು ಅರಳಿತು; ಅವಳ ಚೆಲು ಮೊಗವನ್ನು ಈಕ್ಷಿಸುವುದರಿಂದ

ಅವನ ಎದೆಯು ಹಿಗ್ಗಿತು. ಅವಳಿಗೆ ಹೂಗಳಿಂದ ದೊರಕಿತು ನಲಿವು; ಅವನಿಗೆ ಅವಳ ಮೊಗದಾವರೆಯಿಂದ.

ಹೂಗಳಿಂದ ಕಣ್ಣುಗಳನ್ನೆತ್ತಿದಳವಳು. ತನ್ನ ಮುಂದೆ ನಿಂತ ಅವನನ್ನು ನೋಡಿದಳು. ಆಕೆಯ ಮೋರೆಯು ತುಸು ಕೆಂಬಣ್ಣವನ್ನು ತಾಳಿತು; ತುಟಿಗಳ ಮೇಲೆ ಒಂದು ಮೃದುಹಾಸವು ಸುಳಿದಿತು.

'ಲಿಲ್ಲಿ!'

'ಬಾಲಾ!'

'ನೋಡು ಲಿಲ್ಲೀ, ಹೂಗಳು ಎಷ್ಟು ಸೊಗಸಾಗಿವೆ. ನಿನಗೆ ಬೇಕೆಂತಲೇ ಆರಸಿ ತಂದೆ ಅವುಗಳನ್ನು.'

'ಹೂಂ, ಕುಳ್ಳಿರು; ಬಾಲ, ಏಕೆ ನಿಂತಿರುವೆ? ಹೂಗಳು ಸಿಕ್ಕಿದ ಸಂತೋಷದಿಂದ ನಿನ್ನೊಡನೆ ಕುಳಿತುಕೊ ಎನಲು ಮರೆತಿದ್ದೆ.'

'ಚಿಂತೆಯಿಲ್ಲ. ನಿತ್ಯ ಬರುವಾತನಿಗೆ ಹೇಳಬೇಕಾದ ಆವಶ್ಯಕತೆ ಯೇನು? ನಿನ್ನ ಮನೆಯವರಲ್ಲಿ ನಾನೂ ಒಬ್ಬನೆಂದು ತಿಳಿದರಾಗದೇ? ಇರಲಿ, ಪೀಟರ್ ಎಲ್ಲಿ?'

'ಈಗ ಹೋದ ಮಾರ್ಕೆಟ್ಟಿಗೆ. ಕುಳಿತಿರು; ಇನ್ನು ಸ್ವಲ್ಪ ಸಮಯ ದಲ್ಲಿಯೇ ಅಣ್ಣ ಬರುವನು.'

ಬಾಲ ಒಂದು ಚೇರಿನ ಮೇಲೆ ಆಸೀನನಾದ; ಮೇಜದ ಮೇಲೆ ಇದ್ದ ಒಂದು ಪತ್ರಿಕೆಯನ್ನು ತೆಗೆದು ಹಾಳೆಗಳನ್ನು ಮಗಚಿ ಹಾಕಿದ. ಲಿಲ್ಲಿ ನಿಂತಿದ್ದಳು; ಹೂ ಗೊಂಚಲನ್ನು ಮೂಸಿ ನೋಡುತಿದ್ದಳು. ಬಾಲ ಪತ್ರಿಕೆಯನ್ನು ತನ್ನ ಮೋರೆಗೆ ಅಡ್ಡಲಾಗಿ ಹಿಡಿದಿದ್ದ. ಆದರೆ ಅವನ ಕಣ್ಣುಗಳು ಲಿಲ್ಲಿಯ ಮೋರೆಯ ಕಡೆಗೆ.

'ಬಾಲ, ಸ್ವಲ್ಪ ಚಹಾ ಕುಡಿಯುವಿಯೋ?'

'ಬೇಡ ಲಿಲ್ಲೀ; ಈಗ ಮನೆಯಲ್ಲಿ ಕುಡಿದು ಬಂದೆ.'

'ಕುಡಿದು ಬಂದರೇನು? ಕೊಂಚ ಇಲ್ಲಿಯೂ ಕುಡಿದರಾಗದೇ? ಚಹಾ ತರುವೆ; ಅಡಿಗೆಯವ ಹೊರಗೆ ಹೋಗಿದ್ದಾನೆ.'

ಲಿಲ್ಲಿ ಮನೆಯೊಳಗೆ ತೆರಳಿದಳು.

ಬಾಲ ಗೋಡೆಯ ಮೇಲೆ ದೃಷ್ಟಿಯನ್ನು ಚೆಲ್ಲಿದ. ಏಸುಕ್ರಿಸ್ತನನ್ನು ಶಿಲುಬೆಗೇರಿಸಿದ ಚಿತ್ರವೊಂದು; ಮಗು ಏಸುವನ್ನು ಎತ್ತಿಕೊಂಡಿರುವ ದಿವ್ಯಮಾತೆಯ ಚಿತ್ರವಿನ್ನೊಂದು. ನಾಲ್ಕಾರು ಫೋಟೋಗಳು. ಅವುಗಳಲ್ಲಿ ಒಂದು ಲಿಲ್ಲಿಯದು. ಲಿಲ್ಲಿಯ ಚಿತ್ರವನ್ನು ಬಾಲ ತುಸು ಹೊತ್ತಿನ ತನಕ ನೋಡಿದ.

ಅವನ ಚಿತ್ತದಲ್ಲಿ ಹಲವು ವಿಚಾರಗಳು ತೇಲಿದವು. ತನ್ನ ಎದೆಯಲ್ಲಿ ಅಡಗಿದ ಗುಟ್ಟನ್ನು ಲಿಲ್ಲಿಗೆ ಹೇಳಬೇಕೆಂದಿದ್ದ; ತನ್ನ ಹೃದಯವನ್ನು ಅವಳಿಗೆ ತೋರಿಸಬೇಕೆಂದಿದ್ದ. ಆದರೆ ಹೇಗೆ? ತನ್ನ ಅಂತರಂಗವನ್ನು ಬಿಚ್ಚಿ ತೋರಿಸುವುದು ಹೇಗೆ? ಹೇಗೆ? ಹೇಗೆ? ಬಾಲ ತನ್ನೊಳಗೆ ಹತ್ತೆಂಟು ಸಲ ಈ ಪ್ರಶ್ನೆಯನ್ನು ಹಾಕಿಕೊಂಡ. ಆದರೆ ಜವಾಬು ಸಿಗಲಿಲ್ಲ. ಹೇಗೆಂಬ ಸಮಸ್ಯೆಯನ್ನು ಬಿಡಿಸಲಾಗಲಿಲ್ಲ. ಎದೆಯಲ್ಲಿ ಅಡಗಿದ್ದ ಭಾವಕ್ಕೆ ಹೊರಬರಲು ದಾರಿ ಸಿಗಲಿಲ್ಲ. ಅಲ್ಲಿ ಅಲೆಗಳೇಳುತಿದ್ದವು; ತರಂಗಗಳು ಅಪ್ಪಳಿಸುತಿದ್ದವು.

ಲಿಲ್ಲಿ ಚಹಾ ತೆಗೆದುಕೊಂಡು ಬಂದಳು. ನಡುಗುತ್ತಿರುವ ಕೈಗಳಿಂದ ಲಿಲ್ಲಿ ಕೊಟ್ಟ ಚಹಾವನ್ನು ಬಾಲ ಸ್ವೀಕರಿಸಿದ. ತನ್ನ ಕೈಗಳು ಕಂಪಿಸುತ್ತಿರವುವೇಕೆಂಬುದು ಅವನಿಗೆ ತಿಳಿಯಲಿಲ್ಲ.

ಚಹಾ ಕುಡಿದುದಾಯಿತು. ಲಿಲ್ಲಿಯೊಡನೆ ಏನು ಮಾತಾಡಬೇಕೆಂಬುದು ಬಾಲನಿಗೆ ತಿಳಿಯದಾಯಿತು. ಮಾತು ಬರದ ಮೂಕನಂತೆ ಲಿಲ್ಲಿಯ ಮೋರೆಯನ್ನು ನೋಡುತ್ತ ಕುಳಿತ ಬಾಲ.

'ನೋಡು ಬಾಲ, ಏಕೆ ಸುಮ್ಮನಿರುವೆ? ಬಾ. ನಾವಿಬ್ಬರೂ ತುಸ ಟೇಬಲ್ ಟೆನ್ನೀಸ್ ಆಡುವಾ.' ಎಂದಳು ಲಿಲ್ಲಿ.

'ಹೂಂ' ಎಂದು ಬಾಲ ಒಪ್ಪಿದ.

ಅವರಿಬ್ಬರೂ ಪಕ್ಕದ ಕೋಣೆಗೆ ಹೋದರು. ಅಲ್ಲೊಂದು ದೊಡ್ಡ ಮೇಜ. ನಡುವೆ ಒಂದು ಬಲೆಯನ್ನು ಕಟ್ಟಿದ್ದರು. ಅವರಿಬ್ಬರೂ ಬ್ಯಾಟು

ಗಳನ್ನು ತೆಗೆದುಕೊಂಡರು ; ಆಡ ತೊಡಗಿದರು. ಆಟದಲ್ಲಿ ಲಿಲ್ಲಿ ಗೆಲ್ಲ ತೊಡಗಿದಳು. ಬಾಲನಿಗೆ ಸೋಲಾಗುತ್ತಿದ್ದತು. ಬಾಲ ಸೋಲುತ್ತಿದ್ದು ದನ್ನು ಕಂಡು ಲಿಲ್ಲಿ ನಗುತ್ತಾ ಪ್ರಶ್ನಿಸಿದಳು. 'ಏನು ಬಾಲ, ಏಕೆ ಹೀಗೆ ಆಡುತ್ತಿರುವೆ? ನಿನಗೆ ಆಟದಲ್ಲಿ ರುಚಿಯಿಲ್ಲ ಇಂದು.'

ನಿಜ ಲಿಲ್ಲಿ ನುಡಿದುದು. ಬೇರೊಂದು ಯೋಚನೆಯು ಹಿಂದೆ ಬಾಲನ ಮನಸ್ಸು ಓಡುತ್ತಿದ್ದುದರಿಂದ ಅವನಿಗೆ ಆಟ ರುಚಿಸಲಿಲ್ಲ. ಅವನು ಒಳ್ಳೆ ಆಟಗಾರನಿದ್ದರೂ, ಈ ದಿನ ಲಿಲ್ಲಿಯ ಕೈಯಿಂದ ಸೋಲು ಪಡೆದ.

ಹತ್ತು ಹನ್ನೆರಡು ನಿಮಿಷಗಳ ವರೆಗೆ ಅವರು ಆಡಿದರು. ಬಾಲನಿಗೆ ಆಟದಲ್ಲಿ ಆಸಕ್ತಿಯಿಲ್ಲವೆಂಬುದನ್ನು ಲಿಲ್ಲಿ ತಿಳಿಯದಿರಲಿಲ್ಲ. ಅವನು ಮನಸ್ಸು ಮಡಗದೆ ಆಡುತಿದ್ದುದನ್ನು ನೋಡಿ ಲಿಲ್ಲಿಗೂ ಬೇಸರವೆನಿ ಸಿತು. ಅವಳು ನುಡಿದಳು. 'ಬಾಲ, ಈ ದಿನ ನಿನಗೆ ಆಟದಲ್ಲಿ ರುಚಿಯಿಲ್ಲ. ಆದುದರಿಂದ ಆಟ ಸಾಕು. ಹೊರಗಿನ ಹೂದೋಟಕ್ಕೆ ಹೋಗುವ.'

'ಸರಿ.' ಬಾಲ ಅವಳ ನುಡಿಗೆ ಒಪ್ಪಿದ.

ಇಬ್ಬರೂ ಹೂದೋಟಕ್ಕೆ ತೆರಳಿದರು. ಗುಲಾಬಿ ಗಿಡಗಳು, ಮಲ್ಲಿ ಗೆಯ ಬಳ್ಳಿಗಳು. ಆದರೆ ಎಲ್ಲವೂ ಹಸಿರು. ಇನ್ನೂ ಹೂವಾಗ ತೊಡ ಗಿರಲಿಲ್ಲ. ತೋಟದ ನಡುವೆ ಒಂದು ಪುಟ್ಟ ಮಾವಿನ ಮರ; ಅದರಡಿ ಯಲ್ಲಿ ಮೃದುವಾದ ಗರಿಕೆ ಹುಲ್ಲು. ನೆಲದ ಮೇಲೆ ಹೊರಳಿಸಳು ಲಿಲ್ಲಿ. ಬಾಲ ಮರದ ನೆರಳಿನಲ್ಲಿ ಆಸೀನನಾದ.

ಸಂಜೆಯ ಸೂರ್ಯ ಪಡುವಣದಲ್ಲಿ ಥಳಥಳಿಸುತಿದ್ದ. ಅವನ ಹೊಂಬ ಣ್ಣದ ಕಿರಣಗಳು ತೋಟದಲ್ಲಿ ಹರಡಿದ್ದವು. ಈ ಬಿಸಿಲಿನಲ್ಲಿ ತರುಲತೆಗಳು ನಗುತ್ತಿದ್ದವು. ಬಾನಿನಲ್ಲಿ ಒಂದೆರಡು ಮೋಡಗಳು ತೇಲುತಿದ್ದವು. ಶಾಂತತೆ ಹರಡಿದ್ದಿತು.

'ಏನು ಬಾಲ?' ಲಿಲ್ಲಿ ನುಡಿದಳು. 'ಕೆಲವು ದಿನಗಳಾದುವು ಒಂದು ಮಾರ್ಪು ಗೋಚರಿಸತೊಡಗಿ. ಬಾಯಿ ಬಿಚ್ಚಿ ಮಾತಾಡುವುದಿಲ್ಲ. ಯಾವಾಗಲೂ ಆಲೋಚನೆಯಲ್ಲಿರುವೆ.'

ತನ್ನ ಮನಸಿನಲ್ಲಿರುವುದೇನೆಂಬುದು ಲಿಲ್ಲಿಗೆ ತಿಳಿದಿರಬಹುದೇ ಎಂಬ ವಿಚಾರವು ಬಾಲನ ಮನಸ್ಸಿನಲ್ಲಿ ತೇಲಿತು. ಮುಖದಲ್ಲಿ ಗೋಚರಿಸ ತಕ್ಕ ಹಾವಭಾವಗಳಿಂದ ಮನುಷ್ಯನ ಅಂತರಂಗದಲ್ಲಿರುವುದೇನೆಂದು ಊಹಿಸಲು ಸಾಧ್ಯವಂತೆ. ಅದರಂತೆ ಲಿಲ್ಲಿ ತನ್ನ ಮನಸ್ಸಿನಲ್ಲಿ ಮಿಂಚು ತ್ತಿರುವ ವಿಚಾರಗಳನ್ನು ಅರಿತಳೇ? ತಿಳಿದರೇನು? ತನ್ನ ಅಂತರಂಗವನ್ನು ಬಿಚ್ಚಿ ಅವಳಿಗೆ ತೋರಿಸಬೇಕು. ತನ್ನ ಈ ಹುಚ್ಚನ್ನು ಅರಿತರೆ ಅವಳೇ ನೆಂದಾಳು? ಅದು ಅವಳಿಗೆ ರುಚಿಸದಿದ್ದರೆ? ತಮ್ಮ ಮಧ್ಯೆ ನೆಲಸಿದ ಮೈತ್ರೀ ಒಂಧವು ಕಡಿದು ಹೋದರೆ?

ಹೀಗೆ ಹಲವು ಚಿಂತೆಗಳು ಬಿಂಬಿಸುತಿದ್ದವು ಬಾಲನ ಮನಸ್ಸಿನಲ್ಲಿ. ಲಿಲ್ಲಿಯ ಸಂಗಡ ತನ್ನ ಅಂತರಂಗದ ಬಗೆಯನ್ನು ಉಸುರುವ ಬಗೆ ಹೇಗೆಂಬುದು ಬಾಲನಿಗೆ ಹೊಳೆಯಲಿಲ್ಲ.

ಒಂದು ಪುಟ್ಟ ತೋಡನ್ನು ಸ್ವಲ್ಪ ಸಮಯದವರೆಗೆ ಕಟ್ಟಿ ನಿಲ್ಲಿಸ ಬಹುದು. ಆದರೆ ಕಟ್ಟಿ ನಿಂತ ನೀರಿಗೆ ಹರಿಯಲು ಬೇರೊಂದು ದಾರಿಮಾಡಿ ಕೊಡದೆ ತೋಡಿನ ನೀರನ್ನು ಕಟ್ಟಿ ನಿಲ್ಲಿಸಬೇಕೆಂದರೆ ಅದು ಸಾಧ್ಯವಾಗದ ಮಾತು. ನೀರು ತುಂಬಲು ಹೊರಗೆ ಹರಿಯಲು ಬೇರೆ ದಾರಿಯಿಲ್ಲದಿರುವುದ ರಿಂದ ಕಟ್ಟು ಸಡಿಲವಾಗತೊಡಗುತ್ತದೆ; ಕಟ್ಟನ್ನು ಮುರಿದು ತೊರೆಯು ಮುಂದೆ ಸಾಗುತ್ತದೆ. ಇದರಂತೆ ಮನಸ್ಸಿನಲ್ಲಿ ಮೂಡಿದ ಬಯಕೆಗಳನ್ನು ಬಹುದಿನದವರೆಗೆ ಕಟ್ಟಿ ನಿಲ್ಲಿಸಲಾಗುವದಿಲ್ಲ. ಅದಕ್ಕೆ ಹೊರಗೆ ಹರಿಯಲು ಇತರ ಹಾದಿ ಸಿಗದಿರಲು ತನ್ನ ಕಟ್ಟನ್ನು ಸಡಲಿಸಿಕೊಂಡು ಹೊರಗೆ ಬರುತ್ತದೆ. ಇದರಂತೆ ಆಯಿತು ಬಾಲನ ಸ್ಥಿತಿಯು. ಲಿಲ್ಲಿಯಿಂದ ಇದು ವರೆಗೆ ಅಡಗಿಸಿಟ್ಟಿದ್ದ ಸಂಗತಿಯು ಅವನ ಅಂತರಂಗದಿಂದ ಹೊರಗೆ ಹರಿ ಯಲು ಪ್ರಯತ್ನಿಸತೊಡಗಿತು.

ಲಿಲ್ಲಿ ಮಾಮರದ ನೆರಳಿನಲ್ಲಿ ಕುಳಿತಿದ್ದಳು. ಬಾಲ ಸ್ವಲ್ಪ ದೂರ ದಲ್ಲಿ ಆಸೀನನಾಗಿದ್ದ. ಆಗಾಗ ಅವನ ದೃಷ್ಟಿಯು ಲಿಲ್ಲಿಯ ಮುಖದ ಕಡೆಗೆ ಹರಿಯುತ್ತಿದ್ದಿತು. ಆಗಾಗ ಅವಳ ತುಟಿಗಳ ಮೇಲೆ ಮೂಡುತಿದ್ದ ಮೃದು ಹಾಸವು ಬಾಲನ ಎದೆಯನ್ನು ಅರಳಿಸುತಿದ್ದಿತು.

'ಲಿಲ್ಲೀ!'

'ಏನು?' ಈ ಪ್ರಶ್ನೆಯನ್ನು ಲಿಲ್ಲಿಯ ಕಣ್ಣುಗಳು ಸೂಚಿಸಿದವು.

'ನೋಡು ಲಿಲ್ಲಿ, ಒಂದು ವಿಷಯವನ್ನು ನಿನ್ನ ಸಂಗಡ ಹೇಳ ಬೇಕೆಂದಿರುವೆ.' ಬಾಲನ ಮೃದು ಸ್ವರವು ಹೊರಟಿತು.

'ಹೂಂ, ಹೇಳು, ಬಾಲ.'

'ಒಂದು ವೇಳೆ ನೀನು ಸಿಟ್ಟು ಮಾಡಬಹುದು.'

'ನಿನ್ನ ಸಂಗಡ ಸಿಟ್ಟಿಗೇಳುವುದೇ? ಅದಾಗದ ಮಾತು.'

'ಹಾಗಾದರೆ ಹೇಳಲೇ?'

'ಹೂಂ, ಹೇಳಿ ಬಿಡು.'

'ನೋಡು ಲಿಲ್ಲಿ, ಏನೆಂದು ಹೇಳಲಾಗುವುದಿಲ್ಲ. ಆದರೂ ನೋಡು, ನೀನಿಲ್ಲದಿರುವಾಗ ನನಗೆ ಬಹು ಬೇಸರವಾಗುತ್ತದೆ.'

ಲಿಲ್ಲಿ ಬಾನಿನಲ್ಲಿ ತೇಲುತಿದ್ದ ಒಂದು ಬಿಳಿಯ ಮುಗಿಲನ್ನು ನೋಡ ತೊಡಗಿದಳು.

'ಲಿಲ್ಲೀ, ನನ್ನ ಮನಸ್ಸಿನಲ್ಲಿ ಬೇರೆ ಯಾವ ವಿಚಾರವೂ ಹೊಳೆಯು ವುದಿಲ್ಲ.' ಬಾಲ ಹೇಳಿದ. 'ನಿನ್ನ ರೂಪಲ್ಲದೆ ಇನ್ನಾವುದೂ ಮನಸ್ಸಿನಲ್ಲಿ ಹೊಳೆಯುವುದಿಲ್ಲ.'

'ಬಾಲ' ಎಂದಳು ಲಿಲ್ಲಿ. ಮುಗಿಲನ್ನು ನೋಡುತಿದ್ದ ಕಣ್ಣುಗಳು ಬಾಲನ ಕಡೆಗೆ ತಿರುಗಿದವು.

ಮೌನ—ಶಾಂತತೆ. ಪುನಃ ಒಬ್ಬರ ಮೋರೆಯನ್ನು ಇನ್ನೊಬ್ಬರು ನೋಡಿದರು. ಲಿಲ್ಲಿಯ ಅರಳಿದ ಕಣ್ಣುಗಳ ಹೊಳಪಿನಿಂದ ಅವಳ ಅಂತ ರಂಗದಲ್ಲಿರುವುದೇನೆಂದು ತಿಳಿಯಲು ಯತ್ನಿಸಿದ ಬಾಲ. ಬಾಲ ಮೇಲೆ ಹೇಳಿದ ಮಾತುಗಳನ್ನಾಡಿದಾಗ ಲಿಲ್ಲಿಯ ಎದೆಯು ತೀವ್ರವಾಗಿ ಬಡಿದು ಕೊಳ್ಳುತಿದ್ದಿತು. ಮೂಡಿದವು ಕೆಲವು ಬೆವರ ಹನಿಗಳು ಆಕೆಯ ಹಣೆಯ ಮೇಲೆ. ಕರ ವಸ್ತ್ರದಿಂದ ಅವಳು ಸ್ವೇದ ಬಿಂದುಗಳನ್ನು ಒರಸಿಕೊಂಡಳು. ಮಾತಾಡಲೆತ್ನಿಸಿದಳು; ಆದರೆ ಆಕೆಗೆ ನುಡಿ ಸಿಗಲಿಲ್ಲ. ಒಳಗಿನ ಧ್ವನಿಯು ಹೊರಬರಲಿಲ್ಲ. ಶಿರವನ್ನು ಬಾಗಿಸಿ ನೆಲದ ಮೇಲೆ ನಗುತಿದ್ದ ಗರಿಕೆ

ಹುಲ್ಲನ್ನು ನೋಡಿದಳು. ಒಂದು ಗರಿಕೆ ಹುಲ್ಲನ್ನು ಕಿತ್ತು ಬಾಯಿಗೆ ಹಾಕಿಕೊಂಡಳು. ತುಟಿಗಳ ಮೇಲೆ ಒಂದು ಎಳೆ ನಗೆ. ಪುನಃ ಮೌನ; ಆಲೋಚನೆ.

ಕಷ್ಟವೆನಿಸಿದ ಆ ಕೆಲಸವನ್ನು ಬಾಲನೇ ಮಾಡಬೇಕಾಗಿ ಬಂದಿತು. ತನ್ನ ಅಂತರಂಗದಲ್ಲಿರುವುದನ್ನು ಲಿಲ್ಲಿಗೆ ಉಸುರಲು ಅವನು ಯತ್ನಿಸ ತೊಡಗಿದ. ಅದನ್ನು ಹೇಗೆ ಹೇಳಬೇಕೆಂದು ಚಿಂತಿಸಿದ. ಮನದಲ್ಲಿರುವು ದನ್ನು ಇನ್ನೊಂದು ಮನಸ್ಸಿಗೆ ಮುಟ್ಟಿಸುವುದು ಪ್ರಯಾಸವಾಗಿ ತೋರಿತು ಬಾಲನಿಗೆ. ತನಗೆ ಪ್ರಯಾಸವೆನಿಸಿದ್ದ ಆ ಕೆಲಸವನ್ನು ಅವನು ಪ್ರಾರಂಭಿಸಿದ್ದ; ಅದನ್ನು ಪೂರೈಸದೆ ಬೇರೆ ನಿರ್ವಾಹವಿಲ್ಲ.

'ಲಿಲ್ಲೀ, ನಾನು ಹೇಳುವುದನ್ನು ಕೇಳುವಾಗ ನಿನಗೆ ಬೇಸರವಾಗು ವುದೇ?'

'ಇಲ್ಲ'

'ನೋಡು, ನನ್ನ ಮನಸ್ಸಿನಲ್ಲಿರುವುದನ್ನು ನಿನಗೆ ಉಸುರುವೆ'

'ಹೂಂ' ಲಿಲ್ಲಿ ಗರಿಕೆ ಹುಲ್ಲನ್ನು ನೋಡುತ್ತಾ ತಲೆಯಲ್ಲಾಡಿಸಿದಳು.

'ಹಾಗಾದರೆ ನೋಡು, ನನ್ನ ಎದೆಯಲ್ಲಿ ನಿನಗಲ್ಲದೆ ಬೇರೆ ಯಾರಿಗೂ ಸ್ಥಳವಿಲ್ಲ. ಅಹುದು ಲಿಲ್ಲೀ, ನಾನು ನಿನ್ನನ್ನು ಪ್ರೀತಿಸು ತ್ತಿದ್ದೇನೆ' ಹೀಗೆ ತನ್ನ ಅಂತರಂಗದಲ್ಲಿರುವುದನ್ನು ಬಾಲ ಹೇಳಿದ.

ಅವನ ಮಾತುಗಳನ್ನು ಲಿಲ್ಲಿ ಕೇಳಿದಳು; ಆದರೆ ಬಾಲನಿಗೆ ಜವಾಬು ಹೇಳಲಿಲ್ಲ.

'ಲಿಲ್ಲೀ, ನೋಡು ನೀನಿಲ್ಲದೆ ಹೋದರೆ ನನ್ನ ಬದುಕು ಬರಡಾಗು ವುದು. ನೋಡು ಇಷ್ಟು ದಿನಗಳಿಂದ ನನ್ನ ಎದೆಯಲ್ಲಿ ಅಡಗಿಸಿಟ್ಟುದು ದನ್ನು ನಾನೀಗ ನಿನಗೆ ತೋರಿಸಿದೆ. ನಿನ್ನನ್ನು ನಾನು ಪ್ರೀತಿಸುತಿದ್ದೇನೆ.'

ಲಿಲ್ಲಿ ಮೊಗವೆತ್ತಿ ಬಾಲನ ಕಣ್ಣುಗಳನ್ನು ನೋಡಿದಳು. ಇಬ್ಬರ ಕಣ್ಣುಗಳಿಂದ ಹೊರಗೆ ಬರುತಿದ್ದ ಬೆಳಕುಗಳು ಒಂದುಗೂಡಿದವು. ಲಿಲ್ಲಿಯ ಕೊರಳಿಂದ ನುಡಿ ಹೊರಸೂಸದು; ತನ್ನ ಮನಸ್ಸಿನಲ್ಲಿರುವು ದನ್ನು ಹೇಗೆ ಹೊರಗೆ ತರಬೇಕೆಂಬುದು ಆಕೆಗೆ ತಿಳಿಯದು.

'ಲಿಲ್ಲೀ'

'ಏನು ಬಾಲ?'

'ನೋಡು, ನೀನು ನನ್ನನ್ನು ಪ್ರೀತಿಸುತ್ತಿರುವೆಯಾ? ನನ್ನ ಎದೆಯಿಂದ ಹೊರಟು ಬರುವ ಸ್ವರದೊಡನೆ ನಿನ್ನ ಕೊರಳ ಇಂಚರವನ್ನು ಸೇರಿಸ ಬಲ್ಲೆಯಾ?'

'ಆದರೆ'

'ಆದರೇನು?'

'ನೀನು ನಿಜವಾಗಿಯೂ ನನ್ನನ್ನು ಪ್ರೀತಿಸುತ್ತಿರುವೆಯಾ?'

'ನನ್ನ ನುಡಿಯಲ್ಲಿ ನಿನಗೆ ಅಪನಂಬಿಕೆಯೋ?'

'ನಂಬಿಕೆಯಿಲ್ಲದೆಯಿಲ್ಲ; ಆದರೆ ನೋಡು, ಆ ಹಾದಿಯಲ್ಲಿ ಎಷ್ಟು ವಿಘ್ನಗಳು ಬೆಟ್ಟಗಳಂತೆ ಅಡ್ಡ ನಿಂತಿವೆ! ಅವುಗಳನ್ನೆಲ್ಲಾ ದಾಟಿ ನಮಗೆ ಒಂದಾಗಲು ಸಾಧ್ಯವೇ?'

'ಪ್ರೇಮದಿಂದ ಕೂಡಿದ ಎರಡು ಎದೆಗಳು ಒಂದುಗೂಡಲು ಪ್ರಯತ್ನಿಸುವಾಗ, ಅದನ್ನು ತಡೆಯಲು ಲೋಕದಲ್ಲಿ ಯಾವುದಕ್ಕೆ ಸಾಧ್ಯವಿದೆ?'

'ನೋಡು ಬಾಲ, ನಿನ್ನ ತಾಯಿ, ಅಕ್ಕ ಇವರೆಲ್ಲ ಇದಕ್ಕೆ ಒಪ್ಪುವರೇ? ಅವರೆಲ್ಲ ಆಚಾರವಂತ ಬ್ರಾಹ್ಮಣಕುಲದವರು. ತಮ್ಮ ಹುಡುಗ ಇನ್ನೊಂದು ಜಾತಿಯ, ಇನ್ನೊಂದು ಮತದ ಹೆಣ್ಣಿನ ಕೈ ಹಿಡಿಯುವುದನ್ನು ಒಪ್ಪುವರೇ?'

'ಆದರೆ ನೋಡು ಲಿಲ್ಲೀ, ಅವರ ಇಚ್ಛೆಯನ್ನು ನೆರವೇರಿಸಲು ಮಾತ್ರವಲ್ಲ ನಾನು ಜೀವಿಸುತ್ತಿರುವುದು. ನಿನ್ನೊಡನೆ ಜೀವಿಸಲು ಎಲ್ಲ ಮೇರೆಗಳನ್ನು ಮೀರಿ ನಡೆಯುವೆನು ನಾನು.'

'ಅಂದರೇನು ಬಾಲ?'

'ನೋಡು ಲಿಲ್ಲೀ, ನನ್ನ ಅಕ್ಕ, ಅಮ್ಮ ಇವರು ನನ್ನನ್ನು ತಡೆಯುವದಾದರೆ, ನಿನಗಾಗಿ ಅವರೆಲ್ಲರನ್ನೂ ಬಿಡಲು ನಾನು ತಯಾರು. ನನ್ನ

ಎದೆಯಲ್ಲಿ ಉರಿಯುತ್ತಿರುವ ಕಿಚ್ಚು ನಿನ್ನಿಂದಲ್ಲದೆ ಬೇರೆಯವರಿಂದ ಶಾಂತವಾಗದು. ನೀನೊಮ್ಮೆ ಹೇಳು; ನನ್ನನ್ನು ಪ್ರೀತಿಸುವೆಯಾ?'

'ಹೂಂ-' ಎಂಬ ಸ್ವರವು ಲಿಲ್ಲಿಯ ನಾಲಿಗೆಯಿಂದ ಹೊರಟಿತು.

ಬಾಲ ಲಿಲ್ಲಿಯ ಎರಡು ಕರಗಳನ್ನು ತೆಗೆದುಕೊಂಡು ಅವಳ ಮೋರೆಯನ್ನು ನೋಡಿದ. ಅವಳ ಕೆನ್ನೆಯ ಮೇಲೆ ಒಂದು ಚುಂಬನ ವನ್ನು ನೀಡಬೇಕೆಂಬ ಬಯಕೆಯು ಅವನ ಎದೆಯಲ್ಲಿ ಜನಿಸಿತು. ಆದರೆ ಅದು ಈಡೇರಲಿಲ್ಲ. ತೋಟದ ಬಾಗಿಲಿನಿಂದ ಬೇರೊಂದು ಸ್ವರವು ಬಂದುದರಿಂದ ಅವನ ಬಯಕೆ ಈಡೇರಲು ಅನುವು ದೊರೆಯಲಿಲ್ಲ.

'ಲಿಲ್ಲೀ—ಲಿಲ್ಲೀ—' ಎಂದು ಕೂಗುತ್ತಿರುವುದು ಕೇಳಿಸಿತು. ಬಾಲನ ಹಿಡಿತದಿಂದ ಲಿಲ್ಲಿ ತನ್ನ ಕರಗಳನ್ನು ಬಿಡಿಸಿಕೊಂಡಳು. ಈ ಮಾತುಗಳು ಅವಳ ತುಟಿಗಳಿಂದ ಉದುರಿದವು. 'ಬಾಲ, ಅಣ್ಣ ಬಂದಿರುವ; ಕೈ ಬಿಡು.'

'ಲಿಲ್ಲೀ, ನೀನೆಲ್ಲಿ?' ಎನುತ್ತ ಪೀಟರ್ ತಮ್ಮ ಕಡೆಗೆ ಬರುತ್ತಿರು ವುದನ್ನು ಲಿಲ್ಲಿ ಮತ್ತು ಬಾಲ ಇವರು ನೋಡಿದರು.

'ಬಾರಣ್ಣ' ಎಂದಳು ಲಿಲ್ಲಿ.

ಪೀಟರ್ ಸನಿಯಕ್ಕೆ ಬಂದ. ಬಾಲನು ಅವನ ಕಣ್ಣುಗಳಲ್ಲಿ ಬಿದ್ದ. 'ಬಾಲ, ನೀನು ಬಂದು ಬಹಳ ಹೊತ್ತಾಯಿತೇ?' ಈ ಪ್ರಶ್ನೆಯು ಪೀಟರನಿಂದ ಹೊರಟಿತು.

'ಇಲ್ಲಣ್ಣ,—ಬಂದು ಸ್ವಲ್ಪ ಸಮಯವಾಯಿತು.' ಲಿಲ್ಲಿ ಅಣ್ಣನಿಗೆ ಜವಾಬು ಹೇಳಿದಳು. 'ನಾವು ಇಲ್ಲಿ ಮಾವಿನ ಮರದ ಕೆಳಗೆ ಕುಳಿತು ಮಾತಾಡುತಿದ್ದೆವು. ಮನೆಯೊಳಗೆ ಸೆಕೆ; ಇಲ್ಲಿ ಎಷ್ಟು ತಂಪಾದ ಗಾಳಿ!'

ಪೀಟರ್ ಬಾಲನ ಕೈಹಿಡಿದುಕೊಂಡ. 'ಬಾ ಬಾಲ, ಒಳಗೆ ಹೋಗುವಾ. ಇಲ್ಲೇನು? ತುಸ ಟೇಬಲ್ ಟೆನ್ನಿಸ್ ಆಡುವಾ.'

'ನೋಡಣ್ಣ, ಬಾಲನಿಗೆ ಯಾಕೋ ಆಟದಲ್ಲಿ ಈ ದಿನ ಉತ್ಸಾಹವೇ ಇಲ್ಲ' ನಗುತ್ತ ನುಡಿದಳು ಲಿಲ್ಲಿ.

'ಏಕೆ ಬಾಲ, ಇದೇನು ಪೆಚ್ಚರಂತೆ ಮಾತಾಡದೆ ನಿಂತಿರುವೆ?' ಬಾಲನ ಹೆಗಲ ಮೇಲೆ ಕೈ ಹಾಕಿಕೊಂಡು ಹೇಳಿದ ಪೀಟರ್.

'ಪೀಟರ್, ಅಣ್ಣ ತಂಗಿಯರು ಬಾಯಿ ಬಿಚ್ಚ ಹೊರಟರೆ ಅವನ್ನು ಪುನಃ ಮುಚ್ಚುವಂತಿಲ್ಲ. ಮಾತಾಡಲು ಮೂರನೆಯವನಿಗೆ ಸಂದರ್ಭ ವೆಲ್ಲಿ?' ಪೀಟರಿಗೆ ಜವಾಬು ಹೇಳಿದ ಬಾಲ.

ಮೂವರೂ ಮನೆಯೊಳಗೆ ತೆರಳಿದರು. ಪೀಟರ್ ಒಂದು ಕುರ್ಚಿಯ ಮೇಲೆ ಕುಳಿತುಕೊಂಡು ಹೇಳಿದ. 'ಕುಳ್ಳಿರು ಬಾಲ.'

ಬಾಲ ಆಸೀನನಾದ. ಲಿಲ್ಲಿ ಮೇಜಡ ಮೇಲಿದ್ದ ಕನ್ನಡಿಯನ್ನು ತೆಗೆದು ತನ್ನ ಮುಖವನ್ನು ನೋಡಿದಳು. ಕನ್ನಡಿಯಲ್ಲಿ ಲಿಲ್ಲಿಯ ಪ್ರತಿ ಬಿಂಬ ಹೊಳೆಯುತ್ತಿದ್ದುದು ಬಾಲನಿಗೆ ಗೋಚರಿಸಿತು. ಪೀಟರ್ ಮೇಜಡ ಮೇಲಿನಿಂದ ಪತ್ರಿಕೆಯನ್ನು ತೆಗೆದು ಪತ್ರಿಕೆಯ ತಲೆ ಬರಹಗಳ ಕಡೆಗೆ ತನ್ನ ಕಣ್ಣುಗಳನ್ನು ಓಡಿಸಹತ್ತಿದ. ಲಿಲ್ಲಿ ಕನ್ನಡಿಯಿಂದ ತನ್ನ ಮೊಗ ವನ್ನು ಬಾಲನ ಕಡೆಗೆ ತಿರುಗಿಸಿದಳು. ಬಾಲನ ದೃಷ್ಟಿ ತನ್ನ ಕಡೆಗೆ ಹರಿ ಯುತಿದ್ದುದು ಆಕೆಗೆ ಗೋಚರಿಸಿತು. ಅವಳ ತುಟಿಗಳ ಮೇಲೆ ಮೃದು ಹಾಸ; ಅವನ ತುಟಿಗಳ ಮೇಲೆ ಒಂದು ಎಳೆ ನಗೆ.

ಪೀಟರ್ ಪತ್ರಿಕೆಯನ್ನು ಬಿಸುಟ ಮೇಜಡ ಮೇಲೆ; ಅವನ ಕಣ್ಣು ಗಳು ಬಾಲನ ಕಡೆಗೆ ಚಲಿಸಿದವು. ಪೀಟರ್ ಹೇಳಿದ 'ಏನು ಗೋಮ ಟೇಶ್ವರನ ಹಾಗಿರುವೆ?'

'ಮತ್ತಿನ್ನೇನು ಮಾಡಬೇಕು? ಕಿವಿಗಳು ಕಿವುಡಾಗುವಂತ ಕಿರು ಚಿಕೊಳ್ಳಬೇಕೇ?' ಎಂದ ಬಾಲ.

'ಅಲ್ಲ, ಪುಣ್ಯಾತ್ಮ! ಈ ದಿನ ಗಂಭೀರ ಮೂರ್ತಿಯಾಗಿಬಿಟ್ಟ ಯೇನು?—ಸಾಧಾರಣವಾಗಿ ಒಮ್ಮೆ ನೀನು ಬಾಯಿ ಬಿಚ್ಚಿದರೆ ಅದನ್ನು ಪುನಃ ಮುಚ್ಚಿಸಲು ಸಾಕು ಸಾಕಾಗಿ ಬಿಡುತಿದ್ದಿತು. ಈ ದಿನ ಬಾಯಿಗೆ ಬೀಗ ಹಾಕಿಕೊಂಡ ಹಾಗಿದೆ.'

'ಇಷ್ಟು ದಿನ ನಿನಗೆ ಬಾಯಿ ತೆರೆಯಲು ನಾನು ಅವಕಾಶ

ಕೊಡುವುದಿಲ್ಲವೆಂದು ಗೋಳಿಡುತಿದ್ದೆ ನೀನು; ನಿನಗೆ ಬಾಯಿ ತೆರೆಯಲು ಈ ದಿನ ಸ್ವಾತಂತ್ರ್ಯ ಕೊಟ್ಟಿದ್ದೇನೆ' ಪೀಟರಿಗೆ ಜವಾಬು ಹೇಳಿದ ಬಾಲ.

'ಲಿಲ್ಲಿಯ ತುಟಿಗಳ ಮೇಲೆ ಒಂದು ನಗೆಯು ಸುಳಿದಿತು. ಅವಳು ಮೇಜದಲ್ಲಿ ಬಿದ್ದಿದ್ದ ಪತ್ರಿಕೆಗಳ ಅಡಿಯಲ್ಲಿದ್ದ ಒಂದು ಪುಸ್ತಕವನ್ನು ತೆಗೆದು ಕೈಯಲ್ಲಿ ಹಿಡಿದಳು. ತಂಗಿಯ ಕರದಲ್ಲಿ ಪುಸ್ತಕ ಗೋಚರಿಸಲು ಪೀಟರ್ ಪ್ರಶ್ನಿಸಿದ:

'ಅದೇನು ಪುಸ್ತಕ?'

'ಕನ್ನಡ' ಎಂದಳು ಲಿಲ್ಲಿ.

'ಕನ್ನಡವೇ?'

'ಏನಪ್ಪಾ, ಪೀಟರ್ ಕನ್ನಡ ಪುಸ್ತಕ ಓದಿದರೆ ಮೈಲಿಗೆ ಆಗುವುದೇನಪ್ಪಾ!' ಬಾಲ ನುಡಿದ. 'ನಿಮ್ಮ ಕ್ರಿಸ್ಚೀನಿಟಿಯಲ್ಲಿಯೂ ಅಸ್ಪೃಶ್ಯತೆ ಸೇರಿಕೊಂಡಿರುವ ಹಾಗಿದೆ.'

'ನೋಡು, ಕನ್ನಡ ಓದಬಾರದೆಂದಲ್ಲ; ಕನ್ನಡದಲ್ಲಿ ಒಳ್ಳೆಯ ಪುಸ್ತಕಗಳಿಲ್ಲ. ಈಗಿರುವ ಪುಸ್ತಕಗಳನ್ನು ಓದಿದರೆ ತಲೆ ನೋವು ಹಿಡಿಯುತ್ತದೆ. ನೋಡು ಇಂಗ್ಲೀಷು ಪುಸ್ತಕಗಳಂತೆ ಕನ್ನಡ ಪುಸ್ತಕಗಳು ರಸಮಯವಾಗಿಲ್ಲ. ನೋಡು ಬಾಲ. ಹ್ಯೂಗೋನ ಲಾ ಮಿಸರೆಬಲ್ಸ್,- ಟಾಲಸ್ಟಾಯಿಯ ವಾರ್ ಅಂಡ್ ಪೀಸ್ ನಂಥ ಕೃತಿಗಳು ಕನ್ನಡದಲ್ಲಿರುವವೇ ಹೇಳು?'

'ಒಪ್ಪಿಕೊಳ್ಳುವೆ ಪೀಟರ್, ಕನ್ನಡವು ಇಂಗ್ಲಿಷ್, ಫ್ರೆಂಚ್ ರಷ್ಯನ್ ಸಾಹಿತ್ಯಗಳಷ್ಟು ಬೆಳವಣಿಗೆಯನ್ನು ಹೊಂದಿಲ್ಲವೆಂದು. ಆಧುನಿಕ ಕನ್ನಡವು ಗಿಡವಾಗುತ್ತಲಿದೆ ಅಷ್ಟೆ. ಗಿಡವು ಬೆಳೆದು ಹೂ ಬಿಡುವ ಮುನ್ನ, ಆ ಗಿಡದಿಂದ ಹಣ್ಣುಗಳು ಹೇಗೆ ಸಿಗುವವು? ಆಧುನಿಕ ಕನ್ನಡದಲ್ಲಿ ಹ್ಯೂಗೋ, ಅಥವಾ ಟಾಲ್‌ಸ್ಟಾಯಿಯಂಥ ಒಬ್ಬ ಸಾಹಿತಿಯು ಉದಿಸುವ ವೇಳೆ ಇನ್ನೂ ಬಂದಿಲ್ಲ. ಆದರೂ ಎಷ್ಟೋ ಒಳ್ಳೆಯ ಪುಸ್ತಕಗಳು ಕನ್ನಡದಲ್ಲಿವೆ; ಇತರ ಯಾವ ಭಾಷೆಯ ಸಾಹಿತ್ಯಕ್ಕೂ ಕಡಿಮೆ

ಯೆನಿಸದ ಎಷ್ಟೋ ಕೃತಿಗಳು ಕನ್ನಡದಲ್ಲಿವೆ. ಅವುಗಳನ್ನು ನೀನು ಓದಿಲ್ಲ; ತಿಳಿದಿಲ್ಲ. ಓದದೆ ಕನ್ನಡ ಪುಸ್ತಕಗಳೆಂದರೆ ತಲೆ ನೋವೆಂದು ಹೇಳುವುದು ಸರಿಯಲ್ಲ.'

'ಬಾಲ ಹೇಳುವುದರಲ್ಲಿ ನಿಜವದೆಯಣ್ಣಾ;' ಲಿಲ್ಲಿ ನುಡಿದಳು. 'ನೋಡು ಈ ಪುಸ್ತಕವು ಬಹು ಸೊಗಸಾಗಿದೆ. ಇದರಲ್ಲಿ ಎಷ್ಟೊ ಒಳ್ಳೆಯ ಪದ್ಯಗಳಿವೆ.'

'ಯಾವುದಾ ಪುಸ್ತಕ?'

'ಶ್ರೀನಿವಾಸರ ತಾವರೆ' ಪುಸ್ತಕದ ಮೇಲಿನ ಹೊದ್ದಿಕೆಯಲ್ಲಿನ ಹೆಸರು ನೋಡುತ್ತಾ, ಲಿಲ್ಲಿ ಅಂದಳು. 'ನಿನ್ನೆ ದಿನ ಬಾಲ ಇದನ್ನು ತಂದುಕೊಟ್ಟ.'

'ಪುಸ್ತಕ ಇತ್ತ ಕೊಡು ಲಿಲ್ಲೀ.' ಬಾಲ ಹೇಳಿದ. 'ಪೀಟರ್, ಇದರಿಂದ ಒಂದು ಕವಿತೆ ಓದಿ ಹೇಳುವೆ. ಅದು ಚೆನ್ನಾಗಿದೆಯೋ ಎಂಬುದನ್ನು ತಿಳಿದುಕೊಂಡು ಆಮೇಲೆ ಕನ್ನಡವನ್ನು ಹಳಿಯ ತೊಡಗು. ನೋಡು ಪೀಟರ್ ನಾನು ಹೇಳುವುದನ್ನು ಕೇಳು. ಸಾಧಾರಣವಾಗಿ ಕನ್ನಡದಿಂದ ದೂರ ನಿಲ್ಲುವುದೂ, ಕನ್ನಡವೆಂದರೆ ತಲೆ ನೋವೆನ್ನುವುದೂ, ಕ್ರಿಶ್ಚನ ಸಮಾಜದ ಒಂದು ರೂಢಿಯಾಗಿ ಹೋಗಿದೆ. ಇದು ಸಲ್ಲದು; ಕನ್ನಡವನ್ನು ಅವರು ಓದಬೇಕು. ಕನ್ನಡದ ಕುಂದುಕೊರತೆಗಳನ್ನು ಹೋಗಲಾಡಿಸಲು ಅವರೂ ಯತ್ನಿಸಬೇಕು ಇರಲಿ. ನಾನೊಂದು ಕವಿತೆಯನ್ನು ಓದಿ ಹೇಳುವೆ; ಚೆನ್ನಾಗಿದ್ದರೆ ಒಪ್ಪಿಕೋ.

ಲಿಲ್ಲಿಯ ಕರದಿಂದ 'ತಾವರೆ' ಯನ್ನು ಈಸಿಕೊಂಡ ಬಾಲ. ಅದರಲ್ಲಿ ಅವನು ಆರಿಸಿದ ಕವಿತೆಯು 'ಮಾಂಬಿ' ಯಾಗಿತ್ತು. ಬಾಲ 'ಮಾಂಬಿ' ಯನ್ನು ಓದಿದ. ಅಣ್ಣತಂಗಿಯರಿಬ್ಬರೂ ಕವಿತೆಯನ್ನು ಕೇಳಿದರು.

ಬಾಲನ ಸ್ವರವು ಇಂಪಾದುದು; ಅವನು ಮಾಂಬಿಯನ್ನು ಸೊಗಸಾಗಿಯೇ ಓದಿದ. ಅವನು ಓದುತ್ತಿರುವುದನ್ನು ಉಳಿದವರು ಕಿವಿಗೊಟ್ಟು ಕೇಳಿದರು.

'ಮಾಂಬಿ' ಯನ್ನು ಓದಿ ಮುಗಿಸಿದುದಾಯಿತು. ಬಾಲ ಪುಸ್ತಕ ದಿಂದ ತಲೆಯೆತ್ತಿದ. ಲಿಲ್ಲಿಯ ವದನವು ಅವನಿಗೆ ಗೋಚರಿಸಿತು. ಆಕೆಯ ಕಣ್ಣುಗಳಿಂದ ಎರಡು ಬಾಷ್ಪಕಣಗಳುದುರಿದುದನ್ನು ಬಾಲ ನೋಡಿದ. ಅವನ ಕಣ್ಣುಗಳು ಪೀಟರಿನ ಕಡೆಗೆ ಚಲಿಸಿದವು. ಅವನ ಮೋರೆಯಲ್ಲಿ ಕರುಣೆ ಮಿನುಗುತ್ತಿರುವುದು ಬಾಲನಿಗೆ ಗೋಚರಿಸಿತು.

'ನನ್ನ ಎದೆಯು ಕರಗಿದಂತಾಯಿತು' ಅಂದಳು ಲಿಲ್ಲಿ.

'ಪದ್ಯ ಸೊಗಸಾಗಿದೆ' ಎಂದು ಪೀಟರ್ ಒಪ್ಪಿಕೊಂಡ.

'ತಿರುಳನ್ನು ನೋಡದೆ ಕನ್ನಡವನ್ನು ಹಳಿಯದಿರು.' ಬಾಲ ಹೇಳಿದ ಪೀಟರಿಗೆ.

'ಬಾಲ,' ಪೀಟರ್ ತನ್ನ ತುಟಿಗಳನ್ನು ಬಿಚ್ಚಿದ. 'ಪಿಕ್ಚರ್ಸ್ ನೋಡೋಕೆ ಹೋಗೋಣವೇ? ಈಗ ಸಮಯ ೫. ೪೦ ಆಗಿದೆ. ೬. ೩೦. ಕ್ಕಿರುವ ಆಟಕ್ಕೆ ತಲುಪಬಹುದು.'

'ಈ ದಿನದ ಫಿಲ್ಮ್ ಯಾವುದಣ್ಣಾ?' ಲಿಲ್ಲಿ ತನ್ನ ದೃಷ್ಟಿಯನ್ನು ಅಣ್ಣನ ಕಡೆಗೆ ತಿರುಗಿಸಿದಳು.

'ನೋಡು, ಆ ದಿನ ನಾನು ನಿನಗೆ H. G. ವೆಲ್ಸ್‌ನ. Invisible Man' ಎಂಬ ಕತೆಯನ್ನು ಓದಿ ಹೇಳಿದ ನೆನಪು ನಿನಗಿಲ್ಲವೇ ಲಿಲ್ಲೀ? ಆ ಕತೆ ಈಗ ಫಿಲ್ಮ್ ಆಗಿ ಬಂದಿದೆ; ಈ ಹೊತ್ತಿನ ಪಿಕ್ಚರ್ ಅದು. ನನ್ನ ಆಫೀಸಿನಲ್ಲಿರುವ ಜೋಸೆಫ್ ನಿನ್ನೆ ಹೋಗಿದ್ದನಂತೆ. ಬಹು ಚಲೋದಿದೆ ಅಂತ ಅವ ಹೇಳಿದ'

'ಹಾಗಾದರೆ ಹೋಗೋಣವಣ್ಣಾ.' ಲಿಲ್ಲಿ ಹೇಳಿದಳು.

'ಬರುವಿಯೇನಪ್ಪಾ ಬಾಲ?' ಬಾಲನ ಕಡೆಗೆ ಪೀಟರ್ ತನ್ನ ಕಣ್ಣುಗಳನ್ನು ಓಡಿಸಿದ.

'ಇಲ್ಲ ಪೀಟರ್, ನನಗೆ ಮನೆಯಲ್ಲಿ ಸ್ವಲ್ಪ ಕೆಲಸವಿದೆ. ನನಗೆ ಬರುವುದಕ್ಕಾಗುವುದಿಲ್ಲ. ನೀವಿಬ್ಬರೂ ಹೋಗಿ.'

'ಬಾಲ, ನೀ ಬರಲೇಬೇಕು.' ಲಿಲ್ಲಿ ಅಂದಳು.

'ಅಹುದು ಬಾಲ, ನೀ ಜೊತೆಯಲ್ಲಿಲ್ಲದಿದ್ದರೆ ಸೊಗಸೆನಿಸುವುದಿಲ್ಲ. ಏನು ನಿನಗೆ ಈ ದಿನ ಒಂದು ಗ್ರಹಣ ಹಿಡಿದಹಾಗೆ ಇದೆ.'

'ಏನು ಇಲ್ಲ; ಪೀಟರ್, ದೇಹಕ್ಕೆ ಆರೋಗ್ಯವಿಲ್ಲ. ಮನೆಯಲ್ಲಿ ಕೆಲಸವಿದೆ,' ಆಕಳಿಸುತ್ತಾ ಬಾಲ ಜವಾಬು ಹೇಳಿದ.

'ಹಾಗೆ ಹೇಳಿದರಾಗದು ಬಾಲ;' ಲಿಲ್ಲಿ ಬಾಲನ ಕಡೆಗೆ ದೃಷ್ಟಿಯನ್ನು ಹೊರಳಿಸಿದಳು. 'ನೀನು ಬರದಿದ್ದರೆ ನಾವು ಹೋಗುವಂತಿಲ್ಲ. ನೀ ಬರಲೇ ಬೇಕು. ಕೆಲಸವಿದ್ದರೆ ಅದನ್ನು ನಾಳೆ ಮಾಡಬಹುದು ನಾವು ಮೂವರೂ ಪಿಕ್ಚರ್‌ಗೆ ಹೋಗಿ ಬರುವಾ.'

'ಅಹುದು ಬಾಲ, ನೀನು ಬರದಿದ್ದರೆ ನಾವು ಹೋಗುವದಿಲ್ಲ. ನೋಡು, ಆ ಫಿಲ್ಮ್ ಬಹು ಸೊಗಸಾಗಿದೆಯಂತೆ ಕಣೋ.' ಪೀಟರ್ ನಿರ್ಬಂಧಿಸ ತೊಡಗಿದ.

'ನಾನು ಬರಲಾರೆನೆಂದರೂ ನೀವು ನನ್ನನ್ನು ಬಿಡುವಹಾಗಿಲ್ಲ. ನಾನು ಬಾರದುದರಿಂದ ನಿಮ್ಮ ಆ ಸಂತೋಷವು ಇಲ್ಲದಾಗುತ್ತದೆ. ಅದನ್ನು ನಾನೇಕೆ ಕೆಡಿಸಬೇಕು?'

'ಬಾಲ, ನೀ ಬರುವಿಯಲ್ಲವೇ?' ಲಿಲ್ಲಿಯು ನಗುತ್ತ ಪ್ರಶ್ನಿಸಿದಳು.

'ಅಣ್ಣತಂಗಿಯರಿಬ್ಬರೂ ಒತ್ತಾಯ ಪಡಿಸುವಾಗ, ಅದನ್ನು ಮೀರಲು ಹೇಗೆ ಸಾಧ್ಯ? ನಾನು ಸಂಗಡ ಬರದಿದ್ದರೆ ನೀವು ಪಿಕ್ಚರ್‌ಗೆ ಹೋಗುವುದಿಲ್ಲವೆಂದು ಹಟ ಹಿಡಿದಿದ್ದೀರಿ. ನಿಮ್ಮ ಸಂತೋಷವು ಇಲ್ಲದಾಗುತ್ತದೆ. ನಿಮ್ಮ ಸುಖವನ್ನು ನಾನೇಕೆ ಹಾಳು ಮಾಡಬೇಕು?— ನನಗೆ ಇಷ್ಟವಿಲ್ಲದಿದ್ದರೂ ನಿಮ್ಮ ಸಂಗಡ ಫಿಲ್ಮ್ ನೋಡಲು ಹೊರಡಬೇಕಾಗಿ ಬಂದಿದೆ.'

'ಹೊರಡು ಲಿಲ್ಲೀ,' ಪೀಟರ್ ಹೇಳಿದ.' ಸಮಯ ಆಗಲೇ ಐದು ನಲವತ್ತೈದಾಯಿತು. ಸಮಯಕ್ಕೆ ಸರಿಯಾಗಿ ತಲುಪುವುದೊಳ್ಳೆಯದು.'

'ಹೂಂ.' ಎಂದುಕೊಂಡು ಲಿಲ್ಲಿ ತನ್ನ ಕೋಣೆಗೆ ಓಡಿದಳು.

ಕೆಲವು ನಿಮಿಷಗಳಲ್ಲಿಯೇ ಲಿಲ್ಲಿ ತನ್ನ ಉಡಿಗೆತೊಡಿಗೆಗಳನ್ನು

ಬದಲಾಯಿಸಿಕೊಂಡು ಬಂದಳು. ಅವಳು ತಲೆಬಾಚಿ ಹೆರಳು ಹಾಕಿಕೊಂಡಿದ್ದಳು; ಮೋರೆಗೆ ತುಸ ಪವ್ಡರ್ ಹಚ್ಚಿಕೊಂಡಿದ್ದಳು. ಈ ಹೊಸ ಉಡಿಗೆತೊಡಿಗೆಗಳಲ್ಲಿ ಆವಳು ಬಹು ಚೆಲುವೆಯಾಗಿ ತೋರುತಿದ್ದಳು. ಅವಳ ರೂಪವನ್ನು ನೋಡುತ್ತಾ ಬಾಲ ಹೇಳಿದ. 'ನೋಡು ಲಿಲ್ಲೀ, ಆ ಜಡೆಗೆ ಗುಲಾಬಿ ಹೂ ವೊಂದನ್ನು ಸಿಕ್ಕಿಸಿಕೊಂಡರೆ ಬಹು ಸೊಗಸಾಗಿರುತ್ತದೆ. ಬೋಳಾಗಿರುವ ಹಣೆಯ ಮೇಲೆ ಒಂದು ಬೊಟ್ಟು ಹಾಕಿಕೊಂಡರೆ,—'

'ಗಂಧ ಕುಂಕುಮಗಳನ್ನು ಹಣೆಯ ಮೇಲೆ ಬಡಿದುಕೊಳ್ಳಲು ನಾವೇನು ಹಿಂದುಗಳಲ್ಲ.' ಪೀಟರ್ ತನ್ನ ಬಾಯಿಬಿಚ್ಚಿದ.

'ಪೀಟರ್ ಸಿಂಗೊತ್ತಿಲ್ಲ; ಕುಂಕುಮದ ಬೊಟ್ಟೊಂದು ಹಣೆಗೆ ಅಲಂಕಾರ. ಲಿಲ್ಲಿ ತನ್ನ ಹಣೆಯ ಮೇಲೆ ಒಂದು ಬೊಟ್ಟು ಇಟ್ಟುಕೊಂಡರೆ ಅವಳ ಮೋರೆಯು ಈಗಿನದಕ್ಕಿಂತ ಹೆಚ್ಚು ಕಳೆಗೊಳ್ಳುವುದು. ಲಿಲ್ಲೀ, ತಿಲಕ ಹಾಕಿಕೊಳ್ಳದಿದ್ದರೆ ಬೇಡ; ಆದರೆ ನೋಡು, ಜಡೆಗೆ ಒಂದು ಗುಲಾಬಿ ಹೂ ಸಿಕ್ಕಿಸಿಕೋ.'

ಬಾಲನ ಇಷ್ಟದಂತೆ ಲಿಲ್ಲಿ ತನ್ನ ಜಡೆಗೆ ಒಂದು ಗುಲಾಬಿ ಹೂವನ್ನು ಸಿಕ್ಕಿಸಿಕೊಂಡಳು; ಕೈಯ್ಯಲ್ಲಿ ಒಂದು ಕೊಡೆಯನ್ನು ಹಿಡಿದಳು. ಅಣ್ಣನ ಕಡೆಗೆ ಮೋರೆಯನ್ನು ತಿರುಗಿಸಿಹೇಳಿದಳು ಲಿಲ್ಲಿ.

'ಹೊರಡೋಣವೇನಣ್ಣಾ?'

'ಸಮಯ ಆರಾಗಲಿಕ್ಕಾಯಿತು; ಹೋಗುವಾ ಬಾಲ.' ತನ್ನ ಅಂಗಿಯ ಗುಂಡಿಗಳನ್ನು ಸರಿಪಡಿಸಿಕೊಳ್ಳುತ್ತ ಪೀಟರ್ ಆಸನದಿಂದ ಎದ್ದ.

ಬಾಲನೂ ಎದ್ದು ನಿಂತ. ಮೂವರೂ ನಡುಮನೆಯಿಂದ ಹೊರಕ್ಕೆ ಬಂದರು, ಬೀದಿಗಿಳಿದು ಸಿನೆಮಾ ಹಾಲಿನ ಹಾದಿಯನ್ನು ಹಿಡಿದರು.

೨

ಲಿಲ್ಲಿ ಒಂದು ಅಂಗ ವಸ್ತ್ರವನ್ನು ಹೆಣೆಯುತ್ತಿದ್ದಳು. ಬಾಲ ಬಂದುದು ಅವಳಿಗೆ ಕಾಣಲಿಲ್ಲ. ಅವನು ಸದ್ದುಮಾಡದೆ ತನ್ನ ಹೆಜ್ಜೆಗಳನ್ನು ಮುಂದಿಡತೊಡಗಿದ. ಲಿಲ್ಲಿಯ ಬೆನ್ನ ಹಿಂದೆ ಬಂದು ನಿಂತುದಾಯಿತು. ಅವಳ ಬೆನ್ನ ಮೇಲೆ ಉದ್ದವಾಗಿ ಬಿದ್ದಿದ್ದ ಜಡೆಯನ್ನು ನೋಡಿದ ಬಾಲ.

ಅವನ ಕರದಲ್ಲೊಂದು ಚೆಲುವು ಸಾವಂತಿಗೆ ಹೂ. ಕೈಗಳು ಮುಂದಕ್ಕೆ ಸರಿದವು; ಹಿಡಿದಿದ್ದ ಹೂವನ್ನು ಲಿಲ್ಲಿಯ ಜಡೆಗೆಸಿಕ್ಕಿಸಿದ ಬಾಲ. ಅವನ ಕರವು ತನ್ನ ದೇಹವನ್ನು ಸ್ಪರ್ಶಿಸಿದುದನ್ನು ಲಿಲ್ಲಿ ಅರಿತಳು. ಅವಳು ಗಾಬರಿಯಿಂದ ತನ್ನ ಕೆಲಸವನ್ನು ನಿಲ್ಲಿಸಿದಳು; ಚೇರಿನಿಂದ ಎದ್ದು ಹಿಂದಿರುಗಿನೋಡಿದಳು. ಬಾಲನ ನಗೆಯಿಂದ ತುಂಬಿದ ಮೋರೆಯು ಲಿಲ್ಲಿಗೆ ಗೋಚರಿಸಿತು. ಅವಳ ತುಟಿಗಳ ಮೇಲೆ ಒಂದು ಮೃದುಹಾಸವು ನರ್ತಿಸಿತು. ಕೈ ಜಡೆಯ ಬಳಿಗೆ ಸರಿದವು; ಅಲ್ಲಿ ಕಂಗೊಳಿಸುತಿದ್ದ ಸಾವಂತಿಗೆ ಹೂವಿನ ಮೇಲೆ ಆಕೆಯ ಬೆರಳುಗಳಾಡಿದವು. ಅವಳು ಅಂದಳು. 'ಬೇರೆ ಯಾರೋ ಅಂತ ವಿಚಾರಿಸಿದ್ದೆ.'

'ನಿನಗೆ ದಿಗಿಲಾಯಿತೇ ಲಿಲ್ಲೀ? ನೋಡು, ನಮ್ಮ ಮನೆ ತೋಟದಲ್ಲಿ ಒಂದು ಸಾವಂತಿಗೆ ಅರಳಿ ನಿಂತಿತ್ತು. ಅದನ್ನು ಕಿತ್ತುತಂದು ನಿನಗೆ ಕೊಡಬೇಕೆಂದು ವಿಚಾರಿಸಿದೆ. ಹಾಗೆಯೇ ಅದನ್ನು ತೆಗೆದುಕೊಂಡು ಬಂದೆ. ನೋಡು, ನೀನು ಇಲ್ಲಿ ಹೊಲಿಗೆ ಕೆಲಸದಲ್ಲಿ ಆಸಕ್ತಳಾಗಿದ್ದಾಗ ನಿನ್ನ ಬೆನ್ನ ಮೇಲೆ ಬಿದ್ದ ಆ ಉದ್ದದ ಜಡೆಯನ್ನು ನೋಡಿದೆ. ಈ ಹೂ ನಿನ್ನ ಜಡೆಗೆ ಮುಡಿಸಬೇಕೆಂಬ ಆಸೆ ಎದೆಯಲ್ಲಿ ಹುಟ್ಟಿತು. ಹಾಗೆಯೇ ಹೂವನ್ನು ಮುಡಿಸಿಬಿಟ್ಟೆ. ಸಿಟ್ಟಾಗದಿರು.'

'ಸಿಟ್ಟೇಕೆ ಬಾಲ?' ಲಿಲ್ಲಿ ಹೇಳಿದಳು.

ಬಾಲ ಅವಳ ಮೋರೆಯನ್ನು ನೋಡಿದ. ಅವಳ ಹುಬ್ಬುಗಳ ನಡುವೆ ಒಂದು ಪುಟ್ಟ ಬೊಟ್ಟನ್ನು ನೋಡಿದ ಬಾಲ; ಪಕ್ಕದ ಚೇರಿನಲ್ಲಿ ಆಸೀನನಾದ. ಎಳೆ ನಗೆಯೊಡನೆ ಅವನು ನುಡಿದ. 'ಏನು ಲಿಲ್ಲೀ, ಹಿಂದೂ ಮತಕ್ಕೆ ಕನ್ವರ್ಟಾದಂತಿದೆಯಲ್ಲಾ?'

'ಏಕೆ ಹಾಗನುವೆ ಬಾಲ?' ಲಿಲ್ಲಿ ತನ್ನ ಕಣ್ಣುಗಳನ್ನು ದೊಡ್ಡದು ಮಾಡಿದಳು.

'ನೋಡು ಲಿಲ್ಲೀ, ನಿನ್ನೆ ಪೀಟರ್ ಏನು ಹೇಳಿದನೆಂಬ ನೆನಪು ನಿನಗಿಲ್ಲವೇ? ಅವ ಹೇಳಿದ ಗಂಧ ಕುಂಕುಮಗಳನ್ನು ಹಣೆಯ ಮೇಲೆ ಒಡಿದುಕೊಳ್ಳಲು ಹಿಂದುವೋ ಎಂದು. ಹಿಂದೂತ್ವವನ್ನು ಸೂಚಿಸತಕ್ಕ ಈ ಮುದ್ರೆ ಹಾಕಿಕೊಂಡಿರುವುದನ್ನು ಕಂಡು ನೀನು ಕನ್ವರ್ಟಾಗ ಹೊರಟೆಯೋ ಏನೋ ಅಂತ ವಿಚಾರಿಸಿದೆ.'

'ಅಲ್ಲ ಬಾಲ, ನೋಡು, ನಿನ್ನೆ ನೀನು ಹೇಳಿದುದು ಈ ದಿನ ಬೆಳಗ್ಗೆ ನೆನಪಾಯಿತು.' ನಗುತ್ತಾ ಉಸುರಿದಳು ಲಿಲ್ಲಿ. 'ಬೊಟ್ಟು ಹಾಕಿಕೊಂಡರೆ ಸೊಗಸಾಗಿರುವುದೇ ಎಂದು ತಿಳಿಯಬೇಕೆಂಬ ಆಸೆ ಮನದಲ್ಲಿ ಹುಟ್ಟಿತು. ಹಾಗೆಯೇ ಕನ್ನಡಿಯ ಮುಂದೆ ನಿಂತುಕೊಂಡು ಬೊಟ್ಟು ಇರಿಸಿಕೊಂಡೆ ಹಣೆಯ ಮೇಲೆ. ಚೆನ್ನಾಗಿದೆಯೇ ಬಾಲ?'

'ಲಿಲ್ಲೀ ಆ ಕಿರುಬೊಟ್ಟು ನಿನ್ನ ಮೋರೆಯ ಕಾಂತಿಯನ್ನು ಹೆಚ್ಚಿಸುತ್ತದೆ. ಸರಿ, ನೀನು ಒಬ್ಬ ಹಿಂದೂವನ್ನಲ್ಲವೇ ಪ್ರೀತಿಸ ಹೊರಟಿರುವುದು? ಆದುದರಿಂದ ಹಿಂದೂಮುದ್ರಿಕೆಗಳನ್ನು ಹಾಕಿಕೊಳ್ಳುವುದರಲ್ಲಿ ತಪ್ಪಿಲ್ಲ.'

ಅವಳ ಮೋರೆಯು ಕೆಂಪೇರಿತು; ಕಣ್ಣುಗಳು ನೆಲವನ್ನು ನೋಡಿದವು. ನಾಲಗೆಯಿಂದ ಮಾತು ಹೊರಡಲಿಲ್ಲ.

ತನ್ನ ಕೋಟಿನ ಒಳಜೇಬಿಗೆ ಕೈ ಹಾಕಿಕೊಂಡು ಬಾಲ ಹೇಳಿದ.

'ನಿನಗೊಂದು ಕಾಣಿಕೆಯನ್ನು ತಂದಿರುವೆ; ಅದೇನೆಂದು ಊಹಿಸು ನೋಡುವಾ.'

'ಕಾಣಿಕೆಯೇ?' ಲಿಲ್ಲಿ ಕಣ್ಣುಗಳನ್ನು ಅರಳಿಸಿದಳು.

'ಅಹುದು.' ಬಾಲನ ತುಟಿಗಳ ಮೇಲೆ ಮಂದಸ್ಮಿತವೊಂದು ಮೂಡಿತು. 'ನನ್ನ ಪ್ರೀತಿಯ ಗುರುತದು; ಒಂದು ಪುಟ್ಟ ಕಾಣಿಕೆ. ಅದೇನೆಂದು ಹೇಳು.'

ಲಿಲ್ಲಿ ಆಲೋಚಿಸ ಹೊರಟಳು. 'ಯಾವುದಾದರೂ ಒಂದು ಚಿತ್ರ ವಿರಬಹುದು.'

'ಅಲ್ಲ.' ಬಾಲನ ಉತ್ತರ.

'ಯಾವುದಾದರೂ ಒಂದು ಪುಸ್ತಕವಿರಬಹುದು, ನನಗೆ ಓದಲು ತಂದುದಾಗಿರಬೇಕು.'

'ಅಲ್ಲ ಲಿಲ್ಲೀ–'

'ಹೊಲಿಗೆ ಕೆಲಸಕ್ಕಿರುವ ನೂಲು ಇರಬೇಕು.' ಲಿಲ್ಲಿ ನಗುತ್ತಾ ಅಂದಳು.

'ಅಲ್ಲ.' ಬಾಲ ತಲೆಯಲ್ಲಾಡಿಸಿದನು.

'ಹಾಗಾದರೇನು?'

'ಸೋಲು ಒಪ್ಪಿಕೋ; ಹಾಗಾದರೆ ಜೇಬಿನಿಂದ ತೆಗೆದು ತೋರಿ ಸುವೆ.'

'ನಿಲ್ಲು–ಅದೇನೆಂದು ಊಹಿಸುವೆ.' ನಗುವೊಂದು ಮಿನುಗಿತು ಲಿಲ್ಲಿಯ ಮೋರೆಯ ಮೇಲೆ.

'ಹತ್ತು ನಿಮಿಷಗಳ ಸಮಯ ಅದರೊಳಗೆ ನುಡಿಯಬೇಕು.'

ಲಿಲ್ಲಿ ಮಾತಾಡಲಿಲ್ಲ. ಅವಳು ಆಲೋಚಿಸತೊಡಗಿದಳು. ತುಸ ಸಮಯ ಕಳೆದಿತು. ಆ ಮೇಲೆ ಅವಳಂದಳು. 'ನನಗೆಂದು ಎಪ್ಲ್ ಹಣ್ಣು ತಂದಿರಬೇಕು.'

'ಅಲ್ಲ ಲಿಲ್ಲೀ.'

'ಹಾಗಾದರೆ—. ಏನಾದರೂ ಒಂದು ಹೂ ಗೊಂಚಲಿರಬಹುದು.'

'ಊ ಹುಂ.' ಬಾಲ ತಲೆಯಲ್ಲಾಡಿಸಿದ.

ಲಿಲ್ಲಿ ಅವಳ ಮನಸ್ಸಿನಲ್ಲಿ ಹೊಳೆದ ಒಂದೊಂದು ವಸ್ತುಗಳ ಹೆಸರು ಹೇಳಿದಳು. 'ಅಲ್ಲಾ, ಅದಲ್ಲಾ.' ಹೀಗೆ ಬಾಲ ಅವಳಿಗೆ ಜವಾಬು ಹೇಳಿದ. ಹೀಗೆ ಸ್ವಲ್ಪ ಸಮಯ ಕಳೆದಿತು. ಕೊನೆಗೆ ಬಾಲ ಹೇಳಿದ.'ಹತ್ತು ನಿಮಿಷಗಳಾದವು. ಇನ್ನು ನಿನಗೆ Time ಕೊಡುವುದಿಲ್ಲ.'

'ನನಗೆ ತಿಳಿಯದು.' ಲಿಲ್ಲಿ ತಲೆಯಲ್ಲಾಡಿಸಿದಳು.

'ಹಾಗಾದರೆ ಸೋಲು ಒಪ್ಪಿಕೋ.'

'ಹೂಂ, ಸೋತೆ. ನೀನು ತಂದಿರುವುದೇನೆಂಬುದನ್ನು ತೋರಿಸು.'

'ಹಾಗಾದರೆ ಲಿಲ್ಲೀ,' ತನ್ನ ಕೋಟಿನ ಜೇಬಿನೊಳಗಿಂದ ಕೈ ತೆಗೆದ ಬಾಲ.

ಅವನು ತನಗೆ ಕೊಡಲು ತಂದಿರುವುದೇನೆಂಬುದನ್ನು ತಿಳಿಯಲು ಲಿಲ್ಲಿ ಬಾಲನ ಸನಿಯಕ್ಕೆಸರಿದಳು. ಜೇಬಿನೊಳಗಿಂದ ತೆಗೆದ ವಸ್ತುವನ್ನು ತನ್ನ ಅಂಗೈ ಮೇಲೆ ಇಟ್ಟು ಬಾಲ ಲಿಲ್ಲಿಗೆ ತೋರಿಸಿದ. ಅದನ್ನು ಚೆನ್ನಾಗಿ ನೋಡಲು ಅವಳು ತಲೆ ಬಗ್ಗಿಸಿದಳು; ಅವನ ಅಂಗೈ ಮೇಲೆ ಹೊಳೆಯುತಿದ್ದ ವಸ್ತುವನ್ನು ನೋಡಿದಳು. ಅದು ಒಂದು ಚಿನ್ನದ ಉಂಗುರವಾಗಿದ್ದಿತು. ಅವನ ಕೈಯಿಂದ ಆ ಉಂಗರವನ್ನು ತೆಗೆದುಕೊಂಡಳು ಲಿಲ್ಲಿ; ಅದನ್ನು ತನ್ನ ಕಣ್ಣುಗಳ ಹತ್ತಿರ ಒಯ್ದಳು; ಕಣ್ಣುಗಳನ್ನು ಅರಳಿಸಿ ನೋಡಿದಳು. ಆ ಉಂಗುರದ ಮೇಲೆ ಎರಡು ಅಕ್ಷರಗಳಿರುವುದು ಅವಳಿಗೆ ಗೋಚರಿಸಿತು. ಆ ಅಕ್ಷರಗಳು B. L. ಎಂಬವುಗಳಾಗಿದ್ದವು.

'ಲಿಲ್ಲೀ, ಉಂಗುರವನ್ನು ಇತ್ತಕೊಡು.'

ಲಿಲ್ಲಿ ಉಂಗುರವನ್ನು ಬಾಲನಿಗೆ ಕೊಟ್ಟಳು.

'ನೋಡು, ಇದರ ಮೇಲೆ ನಮ್ಮಿಬ್ಬರ ಹೆಸರುಗಳನ್ನು ಕೆತ್ತಿಸಿರುವೆ. B. L. ಅಂದರೆ ಬಾಲ ಮತ್ತು ಲಿಲ್ಲೀ ತಿಳೀತೇ?–ಸನಿಯಕ್ಕೆ ಬಾ; ನನ್ನ ಪ್ರೀತಿಯ ಕಾಣಿಕೆಯನ್ನು ಕೊಡಿಸುವೆ ನಿನ್ನ ಬೆರಳಿಗೆ.'

ಲಿಲ್ಲಿ ಸನಿಯಕ್ಕೆ ಬರಲಿಲ್ಲ. ಅವಳ ಕೆಂಪೇರಿದ ಮೊಗವು ಗೋಚರಿಸಿತು ಬಾಲನಿಗೆ.

'ಏಕೆ ಲಿಲ್ಲೀ, ಈ ನಾಚಿಕೆ? ನಾನು ನಿನ್ನನ್ನು ಪ್ರೀತಿಸುತ್ತಲಿರುವೆ. ನೀನಿಲ್ಲದಿದ್ದರೆ ನನ್ನ ಬಾಳು ಬರಿದಾದಂತಾಗುವುದು. ನೀನೂ ನನ್ನನ್ನು ಪ್ರೀತಿಸುತ್ತಿರುವಿಯೆಂಬುದು ನನಗೆ ಗೊತ್ತು. ಲಿಲ್ಲೀ, ಮತ್ತೇಕೆ ಈ ನಾಚಿಕೆ? ನಮ್ಮ ಎದೆಗಳನ್ನು ಬಿಚ್ಚುವಾ. ಎರಡು ಎದೆಗಳಲ್ಲಿಯೂ ತುಂಬಿರುವ ಪ್ರೀತಿಯ ಸಿಹಿನೀರು ಹರಿದು ಒಂದುಗೂಡಲಿ!'

ಬಾಲ ಚೇರಿನಿಂದ ಎದ್ದುನಿಂತ; ಲಿಲ್ಲಿಯ ಸನಿಯಕ್ಕೆ ಸರಿದ. ಅವನು ಲಿಲ್ಲಿಯ ಎರಡು ಕೈಗಳನ್ನು ಹಿಡಿದುಕೊಂಡ. ಆಕೆ ಅವನ ಕೆಲಸವನ್ನು ತಡೆಯಲಿಲ್ಲ. ಬಾಲನ ಕೈ ಅವಳ ದೇಹಕ್ಕೆ ತಾಗಲು ಒಂದು ಅನಿರ್ವಾಚ್ಯ ಸುಖವನ್ನು ಅವಳು ಅನುಭವಿಸಿದಳು. ಬಾಲ ಅವಳ ಕೈ ಹಿಡಿದುಕೊಂಡು ಪುನಃ ಆಸೀನನಾದನು. ಅವಳು ಬಾಗಿದಳು; ಅವಳ ದೇಹವು ಕಂಪಿಸ ತೊಡಗಿತು.

ಅವಳ ಪುಟ್ಟ ಬೆರಳಿನಲ್ಲಿ ಉಂಗುರವನ್ನು ಇಡತೊಡಗಿದ ಬಾಲ. ಅವಳ ಕೈ ನಡುಗುತ್ತಿರುವುದು ಬಾಲನಿಗೆ ಗೋಚರಿಸದಿರಲಿಲ್ಲ. ಅವ ಮೆಲ್ಲನೆ ನುಡಿದ. 'ಲಿಲ್ಲೀ, ನಿನ್ನ ದೇಹವು ನಡುಗುತ್ತಿರುವುದೇಕೆ? ಅಂಜಿಕೆಯಾಗುವುದೇ?'

ಲಿಲ್ಲಿಯ ತುಟಿಗಳಿಂದ ನುಡಿ ಹರಿಯಲಿಲ್ಲ. ಬಾಲ ಲಿಲ್ಲಿಯ ಬೆರಳುಗಳಿಂದ ತನ್ನ ಕಣ್ಣುಗಳನ್ನು ಮೇಲಕ್ಕೆತ್ತಿದ. ಆಕೆಯ ತುಟಿಗಳ ಮೇಲೆ ಒಂದು ಕಿರುನಗೆಯು ನರ್ತಿಸುತ್ತಿದ್ದುದು ಬಾಲನಿಗೆ ಗೋಚರಿಸಿತು. ಇನ್ನೊಂದು ಕ್ಷಣದಲ್ಲಿ ಆ ನಗೆಯು ಬಾಲನ ತುಟಿಗಳ ಮೇಲೆ ಪ್ರತಿಬಿಂಬಿಸಿತು. ಮೌನವು ಅವರ ಎದೆಗಳಿಂದ ಹೊರಬರುತಿದ್ದ ನುಡಿಯಾಯಿತು.

ಬಾಲ ಲಿಲ್ಲಿಯ ಬೆರಳಿಗೆ ಉಂಗುರವನ್ನು ತೊಡಿಸಿದ. ಅವಳ ಮೃದು ಬೆರಳುಗಳನ್ನು ನೋಡಿ ಬಾಲ ಹೇಳಿದ 'ನಿನ್ನ ಬೆರಳುಗಳು ಎಷ್ಟು ಎಂದು!'

ಅವನ ಮೋರೆಯನ್ನೊಮ್ಮೆ ನೋಡಿದಳವಳು. ಕಣ್ಣುಗಳು ಇನ್ನೊಂದು ಕ್ಷಣದಲ್ಲಿ ತನ್ನ ಬೆರಳಮೇಲಿನ ಉಂಗುರದ ಕಡೆಗೆ ಚಲಿಸಿದವು. ಬೆರಳಲ್ಲಿ ಹೊಳೆಯುತ್ತಿದ್ದ ಉಂಗುರವನ್ನು ನೋಡಿದಳು. ಹರುಷದ ಕಿರಣಗಳು ಅವಳ ಕಣ್ಣುಗಳಿಂದ ಸ್ಫುರಿಸಿದವು.

ಒಂದೆರಡು ನಿಮಿಷಗಳು ಗತಿಸಿದವು. ಲಿಲ್ಲಿಗೆ ಏನು ಮಾತಾಡಬೇಕೆಂಬುದು ತಿಳಿಯಲಿಲ್ಲ. ಬಾಲ ಲಿಲ್ಲಿಯ ಬೆರಳಿಗೆ ಉಂಗುರ ತೊಡಿಸಿದಾಗ ಉಂಟಾದ ಹರುಷದಲ್ಲಿ ತನ್ಮಯನಾಗಿದ್ದ. ಆಗಾಗ ನಾಲ್ಕು ಕಣ್ಣುಗಳು ಒಂದುಗೂಡುತಿದ್ದವು. ಕಣ್ಣುಗಳಿಂದ ಸ್ಫುರಿಸಿದ ಬೆಳಕಿನಲ್ಲಿ ತಮ್ಮ ಎದೆಗಳ ಪ್ರೀತಿಗಳನ್ನು ಬೆರಸಿ ಒಬ್ಬರು ಇನ್ನೊಬ್ಬರಿಗೆ ಕೊಡುತಿದ್ದರು.

ಕೊನೆಗೆ ಬಾಲನೇ ಮಾತಾಡಿದ. 'ಲಿಲ್ಲೀ, ನನ್ನ ಪ್ರೀತಿಯ ಕಾಣಿಕೆಯನ್ನು ಇತ್ತುದಾಯಿತು; ಅದಕ್ಕೆ ಬದಲು ನೀನು ನನಗೇನು ಕೊಡುವೆ?'

'ಏನು ಕೊಡಲಿ ಬಾಲ? ನನ್ನ ಬಳಿಯಲ್ಲೇನಿದೆ?'

'ನಿನ್ನಲ್ಲಿರುವುದನ್ನು ಕೊಟ್ಟರೆ ಸಾಕು.' ಬಾಲನ ಮೋರೆಯ ಮೇಲೆ ಒಂದು ತುಂಟತನದ ನಗೆಯು ಮೂಡಿತು.

ಲಿಲ್ಲಿ ಒಂದು ನೋಟವನ್ನು ಚೆಲ್ಲಿದಳು ಬಾಲನ ಮೇಲೆ. ಆ ನೋಟವು 'ನನ್ನನ್ನೇ ನಿನಗೆ ಅರ್ಪಿಸಿರುವೆ; ಇನ್ನೇನು ನನ್ನ ಬಳಿಯಲ್ಲಿದೆ?' ಎಂಬುದನ್ನು ಸೂಚಿಸುತಿದ್ದಿತು.

ಲಿಲ್ಲಿ ಮಾತಾಡದಿರುವುದನ್ನು ನೋಡಿ ಬಾಲ ಹೇಳಿದ. 'ಏಕೆ ಲಿಲ್ಲಿ, ಮೌನದಿಂದಿರುವೆ? ನಿನಗೆ ಬೇಸರವಾಯಿತೇ?'

'ನನಗೆ ಬೇಸರವೇಕೆ ಬಾಲ?'

'ನಾನು ಕೇಳಿದುದು—'

'ಏನದು?'

'ಒಲ್ಲೆನೆನದಿರು!' ಆಶಾಪೂರ್ಣದೃಷ್ಟಿಯಿಂದ ಬಾಲ ಲಿಲ್ಲಿಯ ಮೊಗವನ್ನು ನೋಡಿದ.

'ಇಲ್ಲ; ಏನೆಂದು ಹೇಳು.'

'ಕೊಡುವುದರಿಂದ ಕಡಿಮೆಯಾಗತಕ್ಕ ವಸ್ತು ಅದಲ್ಲ.'

'ಹೀಗೆ ಕೊಂಕಣ ಸುತ್ತ ಬೇಡ.'

'ನಿನ್ನಲ್ಲಿರುವುದನ್ನು ಕೊಟ್ಟರೆ ಸಾಕು.'

'ಅಂದರೆ?' ಲಿಲ್ಲಿ ತನ್ನ ಕಣ್ಣುಗಳನ್ನು ದೊಡ್ಡದು ಮಾಡಿದಳು.

'ಅಂದರೆ ನನಗೆ ಬೇಕಾದುದು ನಿ–ನ್ನ–ಒಂ–ದು–ಮು–ತ್ತು!'

ಬಾಲನ ನುಡಿಗಳನ್ನು ಕೇಳಲು ಲಿಲ್ಲಿಯ ಕೆನ್ನೆಗಳು ಕೆಂಬಣ್ಣವನ್ನು ಹೊಂದಿದವು. ಕಣ್ಣುಗಳು ನೆಲವನ್ನು ನೋಡಿದವು. ನಾಲಿಗೆಯಿಂದ ಮಾತು ಹೊರಡದಾಯಿತು.

ಲಿಲ್ಲಿಯ ಮೌನವನ್ನು ಕಂಡು ಬಾಲನೇ ಮಾತಾಡಿದ. 'ಏಕೆ ಲಿಲ್ಲೀ? ಕೇಳಿದುದನ್ನು ಕೊಡಲಾಗುವುದಿಲ್ಲವೇ?'

'ಬಾಲ!' ಬೇರೆ ಮಾತು ಹೊರಡಲಿಲ್ಲ ಲಿಲ್ಲಿಯ ತುಟಿಗಳಿಂದ; ನೆಲವನ್ನು ನೋಡುತಿದ್ದ ಕಣ್ಣುಗಳನ್ನು ಮೇಲಕ್ಕೆತ್ತಲಿಲ್ಲ.

ಬಾಲ ತನ್ನ ಕೈ ಚಾಚಿದ. ಲಿಲ್ಲಿಯ ಕರವು ಅವನಿಗೆ ದೊರಕಿತು. ತನ್ನ ಚೇರಿನಿಂದ ಅವ ಎದ್ದುನಿಂತ; ಲಿಲ್ಲಿ ಅವನ ಎರಡು ತೋಳುಗಳ ನಡುವಿನಲ್ಲಾದಳು. ಮೆಲ್ಲನೆ ಅವನು ತನ್ನ ಇನ್ನೊಂದು ಕಾಣಿಕೆಯನ್ನು ಲಿಲ್ಲಿಯ ಕೆನ್ನೆಗಳ ಮೇಲೆ ಅರ್ಪಿಸಿದ. ಅವನು ಹೊಸದಾಗಿ ನೀಡಿದ ಕಾಣಿಕೆಯನ್ನು ಲಿಲ್ಲಿ ಬೇಡವೆಂದೆನಲಿಲ್ಲ. ಮೊದಲನೆಯದರಕ್ಕಿಂತ ಹೆಚ್ಚು ಮೆಚ್ಚಿದಳು ಲಿಲ್ಲಿ ಬಾಲನ ಈ ಎರಡನೆಯ ಕಾಣಿಕೆಯನ್ನು!

ಲಿಲ್ಲಿಯ ವದನದಿಂದ ತನ್ನ ಮೋರೆಯನ್ನು ಬಾಲ ಎತ್ತಿದ. ಅವಳ ದೇಹವನ್ನು ಸುತ್ತಿದ. ತೋಳುಗಳ ಕಟ್ಟು ಸಡಿಲವಾಯಿತು. ಅವನು ಪುನಃ ತನ್ನ ಚೇರಿನ ಮೇಲೆ ಆಸೀನನಾದ. ಲಿಲ್ಲಿ ಅರ್ಧ ಹೆಣದಿದ್ದ ಕರವಸ್ತ್ರವನ್ನು ಪುನಃ ತೆಗೆದುಕೊಂಡಳು. ಸೂಜಿಗೆ ದಾರವನ್ನು ಪೋಣಿಸಿದಳು. ಕರವಸ್ತ್ರವನ್ನು ಹೆಣೆಯತೊಡಗಿದಳು.

ಹೊರಗಿನಿಂದ ಹೆಜ್ಜೆಗಳ ಸಪ್ಪಳವು ಕೇಳಿಬಂದಿತು. ತನ್ನ ವಿಕಾರಗಳನ್ನು ಎದೆಯಲ್ಲಿ ಅಡಗಿಸಿಕೊಳ್ಳಲು ಬಾಲ ಪ್ರಯತ್ನಿಸಿದ. ವಿಶೇಷವು ಜರಗಿದೆಯೆಂಬುದನ್ನು ತೋರ್ಪಡಿಸದೆ ಹೊಲಿಗೆಯ ಕೆಲಸದಲ್ಲಿ ನಿರತಳಾದಳು ಲಿಲ್ಲಿ.

ಆಫೀಸಿನಿಂದ ಪೀಟರ್ ಬಂದ. ಅವನ ಕಣ್ಣುಗಳಿಗೆ ನೋಡಲು ಬಿದ್ದವನು ಚೇರಿನ ಮೇಲೆ ಕುಳಿತಿದ್ದ ಬಾಲನಾಗಿದ್ದ. ಬಾಲನನ್ನು ಕಾಣಲು ಪೀಟರ್ ಹೇಳಿದ. 'ಬಾಲ, ಆಗಲೇ ಹಾಜರ್! ಇಷ್ಟು ಬೇಗನೆ ನೀನು ಬಂದಿರಬಹುದೆಂದು ನಾನು ವಿಚಾರಿಸಲಿಲ್ಲ.'

'ಏನಪ್ಪಾ, ನಿನಗಿಂತ ಮೊದಲು ನಾ ಬರಕೂಡದೇ? ಬಾಲ ಪೀಟರಿಗೆ ಸವಾಲು ಹಾಕಿದ.

'ಬರಕೂಡದೆಂದು ಯಾರು ಹೇಳಿದರು? ನೀನು ಬಂದು ಬಹಳ ಸಮಯವಾಯಿತೇ?' ಪೀಟರ್ ಬಾಲನ ಪಕ್ಕದ ಚೇರಿನಲ್ಲಿ ಆಸೀನನಾದ. 'ನೋಡು ಲಿಲ್ಲೀ, ನನಗೆ ಬಹಳ ನೀರಡಿಕೆಯಾಗುತ್ತದೆ. ಅಡಿಗೆಯವನಿಗೆ ಹೇಳು ಬಂದಿಷ್ಟು ಚಹಾ ತರಲು; ಏನಪ್ಪಾ ಬಾಲ, ನೀನು ಚಹಾ ಕುಡಿದಿಯೋ ನಯ್ಯಾ?'

'ಸಾಕು ಪುಣ್ಯಾತ್ಮ! ಕುಡಿದಿಯೋ ಎಂದು ಕೇಳುವ ಉದಾರ ಬುದ್ಧಿಯಾದರೂ ನಿನಗಿದೆಯಲ್ಲ!' ಬಾಲನ ಜವಾಬಿದು.

'ಅಣ್ಣಾ, ಅಡಿಗೆಯವ ಸಾಮಾನು ತರಲು ಮಾರ್ಕೆಟ್ಟಿಗೆ ಹೋಗಿದ್ದಾನೆ. ನಾನೇ ಚಹಾ ಮಾಡಿ ತರುವೆ.' ಅರ್ಧ ಹೆಣೆದು ಪೂರೈಸಿದ ಅಂಗವಸ್ತ್ರವನ್ನು ಮೇಜದ ಮೇಲಿಟ್ಟು ಲಿಲ್ಲಿ ಒಳಗೆ ಹೋದಳು.

ಮೇಜದ ಮೇಲೆ ಬಿದ್ದದ್ದ 'ಹಿಂದೂ'ವನ್ನು ತೆಗೆದುಕೊಂಡು ಬಾಲ ನೋಡತೊಡಗಿದ. ಪೀಟರ್ ಜೇಬಿನಿಂದ ಕರವಸ್ತ್ರವನ್ನು ತೆಗೆದು ತನ್ನ ಮೋರೆಯಮೇಲಿದ್ದ ಬೆವರು ಹನಿಗಳನ್ನು ಒರೆಸಿಕೊಂಡ. ಲಿಲ್ಲಿ ಚಹಾ ತೆಗೆದುಕೊಂಡು ಬಂದಳು; ಇಬ್ಬರ ಮುಂದೆಯೂ ಒಂದೊಂದು ಕಪ್ಪನ್ನು ಮಡಗಿದಳು. ಪೀಟರ್ ಮೇಜದ ಮೇಲಿಂದ ಚಹಾಕಪ್ಪನ್ನು

ತೆಗೆಯುತ್ತಾ ಲಿಲ್ಲಿಯ ಮೋರೆಯನ್ನು ನೋಡಿದ. ಅವಳ ಹುಬ್ಬುಗಳ ನಡುವೆ ಒಂದು ಪುಟ್ಟ ಬೊಟ್ಟು ಪೀಟರಿಗೆ ಗೋಚರಿಸಿತು. ಕಪ್ಪಿನಿಂದ ಒಂದು ಗುಟುಕು ಚಹಾ ಕುಡಿದು ಅವ ಹೇಳಿದ 'ಏಕೆ ಲಿಲ್ಲಿ, ಈ ದಿನ ಬೊಟ್ಟು ಹಾಕಿಕೊಳ್ಳಲು ಪ್ರಾರಂಭಿಸಿದ್ದು?'

ಲಿಲ್ಲಿ ಸುಮ್ಮನಿದ್ದಳು.

'ಎಲ್ಲ ನಿನ್ನ ಉಪದೇಶ ಕಾಣಯ್ಯ,' ಪೀಟರ್ ತನ್ನ ತುಟಿಗಳ ಮೇಲಿಂದ ಚಹಾಕಪ್ಪನ್ನು ತೆಗೆದು ಬಾಲನ ಕಡೆಗೆ ಮೋರೆಯನ್ನು ತಿರುಗಿಸಿ ಹೇಳಿದ.' 'ನೊಡು, ನೀನು ನಮ್ಮಲ್ಲಿಗೆ ಬರಹತ್ತಿದಂದಿನಿಂದ ಅವಳಲ್ಲಿ ದೊಡ್ಡ ಮಾರ್ಪಾಟುಗಳಾಗುತ್ತಿವೆ. ಈ ಮೊದಲು ಕನ್ನಡ ಪುಸ್ತಕಗಳೆಂದರೆ ಅವಳಿಗೆ ತಲೆ ನೋವು; ಅವುಗಳನ್ನು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಆದರೆ ಈಗ ಕನ್ನಡವೆಂದರೆ ಅವಳಿಗೆ ಜೀವ; ಕನ್ನಡವನ್ನಲ್ಲದೆ ಬೇರಾವುದನ್ನೂ ಓದುವಂತಿಲ್ಲ. ನಿನ್ನೆ ಬೊಟ್ಟು ಹಾಕಿಕೊಳ್ಳುವುದನ್ನು ಕುರಿತು ನೀನು ಮಾತಾಡಿದೆ. ಈ ದಿನ ಬೊಟ್ಟು ಇಟ್ಟು ಕೊಂಡಿದ್ದಾಳೆ; ಜಡೆಗೆ ಹೂ ಸಿಕ್ಕಿಸಿಕೊಂಡಿದ್ದಾಳೆ.

'ಪೀಟರ್,' ಬಾಲ ಹೇಳಿದ. 'ನಾನೇನೂ ಕನ್ನಡವನ್ನು ಓದಬೇಕೆಂದು ಅವಳನ್ನು ನಿರ್ಬಂಧಿಸಲಿಲ್ಲ. ಬೊಟ್ಟನ್ನು ಹಣೆಯ ಮೇಲೆ ಇಟ್ಟುಕೊಂಡರೆ ಅವಳ ಮೋರೆ ಇನ್ನಷ್ಟು ಚೆಲುವಾಗಿ ತೋರಬಹುದೆಂದು ಹೇಳಿದುದು ನಿಜ; ಆದರೆ ತಿಲಕವನ್ನು ಹಾಕಿಕೊಳ್ಳಲೇಬೇಕೆಂದು ನಾನು ನಿರ್ಬಂಧಿಸಿದೆನೇ? ಲಿಲ್ಲಿ ನನ್ನ ಇಷ್ಟದಂತೆ ಕುಣಿಯುತ್ತಿರುವಳೆಂಬ ತಪ್ಪು ತಿಳುವಳಿಕೆಯು ನಿನ್ನಲ್ಲಿ ಹುಟ್ಟಿದಹಾಗಿದೆ.'

'ಅಲ್ಲ ಬಾಲ,' ಪೀಟರ್ ಬಾಲನ ಕಣ್ಣುಗಳನ್ನು ನೋಡಿದ. 'ನೀನು ತಪ್ಪು ತಿಳಿದುಕೊಳ್ಳಬೇಡ. ನಿನ್ನಷ್ಟು ಸಲಿಗೆಯ ಗೆಳೆಯರು ನನಗೆ ಬೇರೊಬ್ಬರಿಲ್ಲ. ನಿನ್ನನ್ನು ಬೇರೊಬ್ಬನಂತೆಯಲ್ಲ ನಾನು ಭಾವಿಸಿರುವುದು; ನಮ್ಮ ಕುಟುಂಬದಲ್ಲಿ ಒಬ್ಬನಂತೆ ನಿನ್ನನ್ನು ತಿಳಿದಿರುವೆ.'

'ಅಹುದು, ನಿನಗಿಂತ ಮಿಗಿಲಾದ ಮಿತ್ರರು ನನಗಿಲ್ಲ. ನಿನ್ನ

ಸಹವಾಸದಲ್ಲಿ ನಾನು ಪಡೆಯುವಷ್ಟು ಹರುಷವನ್ನು ಬೇರೊಬ್ಬರ ಸಂಗಡ ನನಗೆ ಸಿಗದು. ಆದುದರಿಂದಲೇ ನನ್ನ ಜಾತಿಯ ಆಚಾರಗಳನ್ನು ಬಿಟ್ಟು ನಿಮ್ಮ ಕುಟುಂಬದಲ್ಲಿ ಒಬ್ಬನಂತೆ ಕಾಲಕಳೆಯುತ್ತಿರುವೆನು.'

ಇಬ್ಬರೂ ಚಹಾವನ್ನು ಕುಡಿದು ಮುಗಿಸಿದರು. ಅರ್ಧ ಹೆಣೆದಿದ್ದ ಅಂಗವಸ್ತ್ರವನ್ನು ತೆಗೆದುಕೊಂಡಳು ಲಿಲ್ಲಿ. ಪೀಟರ್ ಬಾಲನ ಸಂಗಡ ಒಂದೊಂದು ವಿಷಯಗಳನ್ನು ಕುರಿತು ಮಾತಾಡತೊಡಗಿದ. ಬಾಲ ಚೇರಿನ ಮೇಲೆ ಕುಳಿತುಕೊಂಡು ಪೀಟರಿಗೆ ಸಮರ್ಪಕವಾದ ಉತ್ತರಗಳನ್ನು ಕೊಡುತಿದ್ದ. ಅವನ ದೃಷ್ಟಿಯು ಆಗಾಗ ಲಿಲ್ಲಿಯ ಕಡೆಗೆ ಹರಿಯುತಿದ್ದಿತು. ಲಿಲ್ಲಿ ಅವರ ಸಂಭಾಷಣೆಯನ್ನು ಕೇಳುತಿದ್ದಳು; ಅವರ ನುಡಿಗಳ ನಡುವೆ ಬಾಯಿಹಾಕಿ ಒಂದೆರಡು ಮಾತುಗಳನ್ನಾಡುತಿದ್ದಳು.

'ನೋಡು, ಬರುವ ಬುಧವಾರ ಆಫೀಸಿಗೆ ರಜವಿದೆ.' ಪೀಟರ್ ಹೇಳಿದ 'ಏನೋ ಹಿಂದುಗಳ ಮಹಾಲಯ ಅಮಾವಾಸ್ಯೆಯಂತೆ.'

'ನಿನಗೆ ಲೀವ್ ಇಲ್ಲವೇ ಬಾಲ?' ಬಾಲನಿಗೆ ಸವಾಲು ಹಾಕಿದಳು ಲಿಲ್ಲಿ.

'ಇದೆ.' ಎಂದ ಬಾಲ.

'ಹಾಗಾದರೆ ನೋಡಣ್ಣಾ;' ಅಂಗವಸ್ತ್ರವನ್ನು ಹೊಲಿಯುತಿದ ಲಿಲ್ಲಿ ಅಣ್ಣನ ಕಡೆಗೆ ದೃಷ್ಟಿಯನ್ನು ಚಲಿಸಿದಳು.

'ಏನು ಲಿಲ್ಲಿ?' ಪೀಟರ್ ತಂಗಿಯನ್ನು ಪ್ರಶ್ನಿಸಿದ.

'ನೋಡು, ನಾವು ಬೆಟ್ಟಕ್ಕೆ ಹೋಗಬೇಕೆಂದು ವಿಚಾರಿಸತೊಡಗಿ ಎಷ್ಟು ದಿನಗಳಾದವು! ಈ ಬುಧವಾರ ನಿಮ್ಮಿಬ್ಬರಿಗೂ ಲೀವ್ ಇದೆ. ಅಣ್ಣಾ, ಆ ದಿನ ನಾವು ಬೆಟ್ಟಕ್ಕೆ ಹೋಗಿ ಬರುವಾ.'

ಪೀಟರ್ ಬಾಲನ ಮೋರೆಯನ್ನು ನೋಡಿದ.

'ಬಾಲ, ನೀನು ನಮ್ಮ ಹಂಚಿಕೆಗೆ ಒಪ್ಪುವುದಿಲ್ಲವೇ? ಈ ಬುಧವಾರ ಬೆಟ್ಟಕ್ಕೆ ಹೋಗಿ ಬರುವಾ.' ಲಿಲ್ಲಿ ಬಾಲನಿಗೆ ಹೇಳಿದಳು.

'ಆ ದಿನ ಬೇರೆ ಕೆಲಸಗಳಿದ್ದರೆ ನನಗೆ ಬರಲಾಗುವುದಿಲ್ಲ.'

'ಹಾಗೆ ಹೇಳಿದರಾಗದು; ನೀನು ಬರಬೇಕು.' ಎಂದಳು ಲಿಲ್ಲಿ.

'ಅಹುದು, ಲಿಲ್ಲಿ ಹೇಳುವಂತೆ ನೀನು ಬರಲೇಬೇಕು. ನೀನು ಬಂದರೇ ನಾವು ಬೆಟ್ಟಕ್ಕೆ ಹೋಗುವುದು; ತಿಳಿಯಿತೇ? ವಿನೋದ ಸಂಚಾರದಲ್ಲಿ ಆ ದಿನವನ್ನು ನೀನೇಕೆ ಕಳೆಯಕೂಡದು?' ಪೀಟರ್ ನುಡಿದ.

ಬಾಲ, 'ಆಗಲಿ ನೋಡುವಾ.' ಎಂದ.

'ನೋಡುವಾ ಎಂದರಾಗದು; ಎಲ್ಲಾ ಸನ್ನಾಹಗಳನ್ನು ನಾವು ಮಾಡುವೆವು.' ಈ ಮಾತುಗಳು ಪೀಟರನ ನಾಲಿಗೆಯಿಂದ ಉದುರಿದವು.

'ಏನಾದರೂ ಒಂದು ಕಾರಣವನ್ನು ಹೇಳಿ ನೀನು ಬರದಿದ್ದರಾಗದು. ನಾನು ಸುಮ್ಮನಿರಲಾರೆ.' ಎಂದಳು ಲಿಲ್ಲಿ.

'ಬಾರದಿದ್ದರೆ ನೀನು ನನ್ನನ್ನು ದಂಡಿಸುವೆಯಾ?' ಕಿರುನಗೆಯೊಡನೆ ಬಾಲ ಪ್ರಶ್ನಿಸಿದ.

'ಹೂಂ, ದಂಡಿಸುವೆ. ನೀನು ಬರದಿದ್ದರೆ ಬೆತ್ತದಕೋಲಿನಿಂದ ಎರಡು ಏಟುಗಳನ್ನು ಹಾಕುವೆ–ನಿನ್ನ ಬೆನ್ನ ಮೇಲೆ!' ನಗುತ್ತಾ ಲಿಲ್ಲಿ ಬಾಲನಿಗೆ ಉತ್ತರಕೊಟ್ಟಳು.

ಪೀಟರ್ ನಗುತ್ತಾ ಅವರಿಬ್ಬರ ಮಾತುಗಳಲ್ಲಿ ತನ್ನ ಕೊರಳನ್ನು ಸೇರಿಸಿದ. 'ನೋಡು, ಬುಧವಾರ ನೀನು ಬರದಿದ್ದರೆ ಲಿಲ್ಲಿ ನಿನ್ನನ್ನು ದಂಡಿಸುವಳು.'

ಲಿಲ್ಲಿ ಇದಿರು ನೋಡುತಿದ್ದ ಆ ಬುಧವಾರ ಬಂದಿತು. ಬೆಟ್ಟದ ತುದಿಗೆ ಹೋಗಲು ಎಲ್ಲಾ ಸನ್ನಾಹಗಳನ್ನು ಅವಳು ಮಾಡಿದ್ದಳು. ಬುಧವಾರ ಬೆಳಗ್ಗೆ ಆರುತಾಸಿಗೆ ತಮ್ಮ ಮನೆಗೆ ಬರಬೇಕೆಂದು ಬಾಲನಿಗೆ ಪ್ರತ್ಯೇಕ ಸೂಚನೆಯನ್ನು ಈ ಮೊದಲೇ ನೀಡಿದ್ದಳು. ಅವನು ಆ ಮಾತಿಗೆ ಒಪ್ಪಿಕೊಂಡಿದ್ದ. ಒಂದುವೇಳೆ ಪೀಟರ್ ಹೇಳಿದ್ದರೆ ಅದನ್ನು ತಪ್ಪಿ ನಡೆ

ಯುತ್ತಿದ್ದ ಬಾಲ; ಆದರೆ ಲಿಲ್ಲಿಯ ನುಡಿಯನ್ನು ಮೀರಲು ಅವನಿಗೆ ಧೈರ್ಯಸಾಲದು. ಅವಳ ಮಾತನ್ನು ನಿರಾಕರಿಸಿದರೆ, ತನ್ನ ಒಯಕೆ ಹೆಣ್ಣಿನ ಎದೆಗೆ ನೋವಾಗಬಹುದೆಂಬ ಅಂಜಿಕೆಯೂ ಅವನಿಗಿದ್ದಿತು.

ಬುಧವಾರ ಬೆಳಗ್ಗೆ ಆರುತಾಸಿಗೆ ಪೀಟರಿನ ವಸತಿಗೆ ಬಾಲ ತಲುಪಿದ. ಬಾಲನು ಬರುವದನ್ನು ಅಣ್ಣಾತಂಗಿಯರಿಬ್ಬರೂ ಇದಿರು ನೋಡುತ್ತಿದ್ದರು. ಬಾಲನನ್ನು ಕಂಡೊಡನೆಯೇ ಪೀಟರ್ ಹೇಳಿದ. ‘ಆರುತಾಸು ಕಳೆದಿತು; ಇನ್ನು ನೀನು ಬರುವುದಿಲ್ಲವೆಂದು ವಿಚಾರಿಸಿದ್ದೆ.’

‘ನೋಡು, ನನಗೆ ಬೇರೆ ಕೆಲಸಗಳಿದ್ದುವು. ಬಾರದಿದ್ದರೆ ಬೆತ್ತ ತೆಗೆಯುವೆನೆಂದು ಲಿಲ್ಲಿ ಹೇಳಿದುದು ನೆನಪಿಗೆ ಬಂದಿತು. ಅವಳ ದಂಡನೆಗೆ ಅಂಜಿ, ಇತರ ಕೆಲಸಗಳನ್ನು ಬಿಸುಟು ಇತ್ತಕಡೆ ಓಡಿ ಬಂದೆ.’

ಪೀಟರಿನ ಮೋರೆಯ ಮೇಲೆ ನಗೆಯು ಮಿನುಗಿತು. ಲಿಲ್ಲಿಯ ತುಟಿಗಳ ಮೇಲೆ ಮಂದಸ್ಮಿತವೊಂದು ಬೆಳಗಿತು. ತನ್ನ ನಗುವನ್ನು ನಿಲ್ಲಿಸಿ ಪೀಟರ್ ಹೇಳಿದ. ‘ಬಾಲ, ನೀನು ಚಹಾ ಕುಡಿದು ಬಂದೆಯಾ? ಲಿಲ್ಲೀ, ಒಂದು ಕಪ್ಪು ಚಹಾ ತರಲು ಅಡಿಗೆಯವನಿಗೆ ಹೇಳು. ಹೊತ್ತಾಯಿತು; ಬಿಸಿಲೇರುವ ಮುನ್ನ ಬೆಟ್ಟದ ತುದಿಗೆ ತಲುಪಬೇಕು.’

‘ತೊಂದರೆ ತಕ್ಕೊಳ್ಳಬೇಡ ಲಿಲ್ಲೀ?’ ಬಾಲ ಹೇಳಿದ. ‘ನಾನು ಚಹಾ ಕುಡಿದೇ ಬಂದಿರುವೆನು.’

‘ಚಹಾ ಕುಡಿದು ಬಂದರೇನಾಯಿತು? ಇಲ್ಲಿ ಒಂದು ಕಪ್ಪು ಕುಡಿಯಬಾರದೇ?’ ನಗುತ್ತಾ ಅಂದಳು ಲಿಲ್ಲಿ. ಅವಳು ಅಡಿಗೆಯವನನ್ನು ಕರೆದು ಹೇಳಿದಳು. ‘ಬಾಲನಿಗೆ ಒಂದು ಕಪ್ಪು ಚಹಾ ಮತ್ತು ರೊಟ್ಟಿಯನ್ನು ತಂದುಕೊಡು.’

‘ನನಗೆ ಯಾವುದೂ ಬೇಕಾಗಿರಲಿಲ್ಲ; ಪೀಟರ್, ಹೊರಡಲು ಇನ್ನು ಬಹಳ ಸಮಯವಿದೆಯೇ?’

‘ಇಲ್ಲ; ನೀನು ಚಹಾ ಕುಡಿ; ಆ ಮೇಲೆ ಹೊರಡುವುದೇ.’ ಪೀಟರ್ ಜವಾಬುಹೇಳಿದ.

ಕೋಮೂ, ಇದು ಅಡಿಗೆಯುವನ ಹೆಸರು,—ಚಹಾವನ್ನೂ ರೊಟ್ಟಿಯನ್ನೂ ತಂದು ಬಾಲನ ಮುಂದಿರಿಸಿದ. ಬಾಲ ಕಪ್ಪಿನಲ್ಲಿರುವ ಚಹಾವನ್ನು ಸಾಸರಿಗೆ ಸುರಿಯುತ್ತಾ ಹೇಳಿದ. 'ಪೀಟರ್, ನೀನು ಚಹಾ ಕುಡಿಯುವುದಿಲ್ಲವೇ?'

'ಇಲ್ಲ, ಈಗ ತಾನೇ ಬೆಳಗಿನ ಉಪ ಆಹಾರವನ್ನು ಪೂರೈಸಿದೆವು. ನೀನು ಬೇಗ ಚಹಾ ಕುಡಿ; ಹೊರಡಲು ಹೊತ್ತಾಗುತ್ತದೆ.'

'ಅವಸರಪಡಬೇಡ ಪುಣ್ಯಾತ್ಮ;' ಒಂದು ತುಣಕು ರೊಟ್ಟಿಯನ್ನು ಬಾಯೊಳಗೆ ಹಾಕಿಕೊಂಡು ಬಾಲ ನುಡಿದ. 'ಸಮಾಧಾನದಲ್ಲಿ ಇಷ್ಟು ಚಹಾ ಕುಡಿಯುವುದಕ್ಕಾದರೂ ಬಿಡು. ಅಲ್ಲದಿದ್ದರೆ ಈ ರೊಟ್ಟಿಯು ಚೂರು ಗಂಟಲಲ್ಲಿ ಸಿಕ್ಕಿಕೊಂಡೀತು!'

'ಅವಸರ ಮಾಡಬೇಡಣ್ಣಾ;' ಲಿಲ್ಲಿ ಅಣ್ಣನಿಗೆ ಹೇಳಿದಳು. 'ಅವ ನೆಮ್ಮದಿಯಲ್ಲಿ ಚಹಾ ಕುಡಿಯಲಿ.'

'ಬೇಗ ಮುಗಿಸು ಮಹಾರಾಯ! ಪೀಟರ್ ಮೇಜಿನ ಮೇಲೆ ಹತ್ತಿಕುಳಿತುಕೊಂಡ.

ಬಾಲ ಚಹಾ ಕುಡಿದು ಮುಗಿಸಿದ. ಮೂವರೂ ಹೊರಟರು, ಅಡಿಗೆಯ ಹುಡುಗನು ಬೆಟ್ಟದ ತುದಿಯಲ್ಲಿ ತಿನ್ನಲಿರುವ ಆಹಾರವಸ್ತುಗಳನ್ನು ತೆಗೆದುಕೊಂಡು ಸಿದ್ಧನಾದ. ಎಲ್ಲರೂ ಹೊರಗೆ ಒಂದು ದಾಯಿತು. ಮನೆಗೆ ಬೀಗಹಾಕಿದರು.

ಬೆಟ್ಟದ ಹಾದಿಯನ್ನು ಹಿಡಿದರು. ಅಗಲ ಕಿರಿದಾದ ದಾರಿಯದು. ಒಬ್ಬರ ಬೆನ್ನ ಹಿಂದೆ ಒಬ್ಬರು ಹೋಗಬೇಕಾಗಿದ್ದಿತು. ದಾರಿಯ ಎರಡು ಪಾರ್ಶ್ವಗಳಲ್ಲಿಯೂ ಎತ್ತರದ ಮರಗಳು; ಅಲ್ಲಲ್ಲಿ ಗಿಡಬಳ್ಳಿಗಳು; ಪೊದರುಗಳು. ಕೇಳಿಬರುತಿದ್ದುವು ಹಕ್ಕಿಗಳ ಇಂಚರಗಳು; ಬೀಸುತಿದ್ದಿತು ತಂಗಾಳಿ. ಅದು ಸಂಚಾರಿಗಳ ಉತ್ಸಾಹವನ್ನು ಹೆಚ್ಚಿಸುತಿದ್ದಿತು. ನೇಸರನಿನ್ನೂ ಉದಿಸಿ ಮೇಲೆ ಬಂದಿರಲಿಲ್ಲ. ಅವನ ಕಿರಣಗಳು ಬಂದು ಭೂಮಿಯ

ತರುಲತಾದಿಗಳಿಗೆ ಬಣ್ಣಗಳನ್ನು ಬಳಿಯ ತೊಡಗಿರಲಿಲ್ಲ. ಸಸುಬೆಳಕು ಹರಡಿದ್ದಿತು.

ಬಿಸಿಲೇರುವ ಮುನ್ನ ಗುಡ್ಡದ ತುದಿಗೆ ತಲುಪಬೇಕೆಂದು ಪೀಟರಿನ ಬಯಕೆ. ಬಿಸಿಲಾದರೆ ಗುಡ್ಡವನ್ನೇರುವಾಗ ಹೆಚ್ಚಿಗೆ ದಣಿವಾಗುವುದೆಂದು ಅವ ತಿಳಿದಿದ್ದ. ಆದುದರಿಂದ ಅವನು ಬೇಗ ಬೇಗನೆ ಹೆಜ್ಜೆಗಳನ್ನು ಮುಂದಿಡುತ್ತಿದ್ದ. ಅಣ್ಣನ ಬೆನ್ನ ಹಿಂದೆ ಲಿಲ್ಲಿ; ಅವಳು ಒಂದು ಕೈಯಲ್ಲಿ ತನ್ನ ಕೊಡೆಯನ್ನು ಹಿಡಿದಿದ್ದಳು. ಅವಳ ಹಿಂದೆ ಬಾಲ; ಲಿಲ್ಲಿಯ ಬೆಂಗಾವಲಿನ ಭಟನಂತೆ ಅವಳ ಬೆನ್ನ ಹಿಂದೆ ಅವನು ಬರುತಿದ್ದ. ಎಲ್ಲರಿಗೂ ಹಿಂದೆ ಅಡಗೆಯ ಕೋವಾ; ಅವನು ಒಂದು ಹೊರೆಯನ್ನು ಹೊತ್ತುಕೊಂಡು ಬಂದಿರುತಿದ್ದುದರಿಂದ ಬೇಗನೆ ಇತರರೊಡನೆ ನಡೆಯಲಾಗುತ್ತಿರಲಿಲ್ಲ. ಆದುದರಿಂದ ಅವನು ಬಹಳ ಬೆನ್ನ ಹಿಂದೆ ಬಿದ್ದಿದ್ದ. ಮುಂದಿರುವ ಮೂವರೂ ಮಾತಾಡುತಿದ್ದರು; ನಗುತಿದ್ದರು.

ಪಕ್ಕದ ಪೊದರೊಳಗಿಂದ ಬುರ್ರೆಂಬ ಸದ್ದೊಂದು ಕೇಳಿಬಂದಿತು. ಲಿಲ್ಲಿ ತನ್ನ ಚಲನೆಯನ್ನು ನಿಲ್ಲಿಸಿದಳು. 'ಏನಣ್ಣ ಅದು?' ಅವಳು ತನ್ನ ಕಣ್ಣುಗಳನ್ನು ದೊಡ್ಡದು ಮಾಡಿದಳು.

'ಏಕೆ ಲಿಲ್ಲಿ, ದಿಗಿಲಾಯಿತೇ?' ನಗುತ್ತ ಪ್ರಶ್ನಿಸಿದ ಬಾಲ. ನೀನು ಇಷ್ಟು ಅಂಜಿಕೆಯಿರುವವಳೆಂದು ನಾನು ತಿಳಿದಿರಲಿಲ್ಲ.'

'ಒಂದು ಕಾಡು ಹಕ್ಕಿ ಇರಬಹುದು.' ತನ್ನ ಚಲನೆಯನ್ನು ನಿಲ್ಲಿಸಿ ಶಬ್ದ ಬಂದ ಕಡೆಗೊಮ್ಮೆ ನೋಡಿ ಪೀಟರ್ ಹೇಳಿದ. ನಮ್ಮ ಮಾತುಗಳಿಂದ ಅದು ಹೆದರಿ ಪೊದರೊಳಗಿಂದ ಹಾರಿಹೋಯಿತೆಂದು ತೋರುತ್ತದೆ.'

'ಎಂಥ ಹಕ್ಕಿ ಅದು?'

'ನಾನು ಅದನ್ನು ಚೆನ್ನಾಗಿ ನೋಡಲಿಲ್ಲ. ಪೊದರೊಳಗಿಂದ ಅದು ಹಾರುವುದನ್ನು ಮಾತ್ರ ಕಂಡೆ.'

'ಪಕ್ಷಿಯ ವೃತ್ತಾಂತವನ್ನು ಆ ಮೇಲೆ ಹೇಳಬಹುದು. ಪೀಟರ್,

ಇಲ್ಲಿ ಮಾತಾಡುತ್ತಾ ನಿಂತರೆ ಹೊತ್ತಾಗುವುದು. ಬಿಸಿಲೇರುವ ಮುನ್ನ ಬೆಟ್ಟದ ತುದಿಗೆ ತಲುಪಬೇಕೆಂದು ಹೇಳುತಿದ್ದವನು ನೀನೇ ಅಲ್ಲವೇ ?'

ಪೀಟರ್ ಮುಂದೆ ಹೆಜ್ಜೆಗಳನ್ನು ಹಾಕಿದ. ಇತರರು ಅವನನ್ನು ಹಿಂಬಾಲಿಸಿದರು.

ನೇಸರು ಹುಟ್ಟಿ ಬಂದ. ಅವನ ಕಿರಣಗಳು ಇಳೆಯುಲ್ಲಿ ಹರಡಿದವು. ಎತ್ತರದ ಮರಗಳ ಎಡೆಗಾಗಿ ಗೋಚರಿಸುತಿದ್ದ ನೇಸರನ್ನು ಲಿಲ್ಲಿಗೆ ತೋರಿಸುತ್ತಾ ಬಾಲ ಹೇಳಿದ. 'ಆ ಮರಗಳ ಸಂದಿಗಾಗಿ ನೋಡು.'

ಲಿಲ್ಲಿ ನೋಡಿದಳು. ಕೆಂಬಣ್ಣದ ಸೂರ್ಯಬಿಂಬವು ಅವಳಿಗೆ ಗೋಚರಿಸಿತು. ಅದು ಥಳಥಳನೆ ಹೊಳೆಯುತ್ತಲಿದ್ದಿತು. ಹುಟ್ಟಿಬರುತಿದ್ದ ನೇಸರನ್ನು ನೋಡುತ್ತಾ ನಿಂತಳು ಲಿಲ್ಲಿ. 'ಎಷ್ಟು ಅಂದವಾಗಿದೆ; ಹೊಳೆಯುತ್ತಿರುವ ಕಾಲ್ಚೆಂಡಿನ ಹಾಗಿದೆ. ಥಳಥಳನೆ ಮಿನುಗುತ್ತಿರುವ ಅದನ್ನು ನೋಡು ?'

ಕಿರಣಗಳು ಬಂದವು; ಅವು ಲಿಲ್ಲಿಯ ಕೆನ್ನೆಗಳನ್ನು ಸ್ಪರ್ಶಿಸಿದವು. ಮುಂಜಾನೆಯ ಬಿಸಿಲು ಅವಳ ಮೋರೆಗೆ ಹೊಸ ಕಾಂತಿಯನ್ನು ಬಳಿದಿತು. ಅವಳ ಮೋರೆಯಲ್ಲಿ ಒಂದು ಹೊಸ ಚೆಲುವನ್ನು ಕಂಡ ಬಾಲ. ಉದಿಸಿ ಬರುತಿದ್ದ ನೇಸರು ಬಿಂಬವನ್ನು ನೋಡುವುದನ್ನು ಬಿಟ್ಟು ಎಳೆ ಬಿಸಿಲಲ್ಲಿ ಹೊಳೆಯುತಿದ್ದ ಲಿಲ್ಲಿಯ ಮೊಗವನ್ನು ನೋಡುತ್ತಾ ಅವನು ನಿಂತ. ಹಾಗೆಯೇ ಅವಳ ಕೆನ್ನೆಗಳನ್ನೊಮ್ಮೆ ಚುಂಬಿಸಬೇಕೆಂಬ ಬಯಕೆಯು ಅವನ ಎದೆಯಲ್ಲಿ ಉದಿಸಿತು. ಮುಂದೆ ಪೀಟರ್ ಇದ್ದ, ಹಿಂದೆ ಅಡಿಗೆಯವನು ಬರುತಿದ್ದ. ಆದುದರಿಂದ ಬಾಲ ತನ್ನ ಬಯಕೆಯನ್ನು ಎದೆಯಲ್ಲಿಯೇ ಅಡಗಿಸಿಕೊಳ್ಳಬೇಕಾಯಿತು. ಅವಳ ಚೆಲುವು ಮೋರೆಯನ್ನು ನೋಡಿ ಅದರಿಂದ ತೃಪ್ತಿಪಡೆಯಬೇಕಾಯಿತು.

ಲಿಲ್ಲಿಯೂ, ಬಾಲನೂ ಹಿಂದೆ ಉಳಿದರು. ಮುಂದೆ ಹೋಗುತಿದ್ದ ಪೀಟರಿಗೆ ಇದು ತಿಳಿಯಲಿಲ್ಲ. 'ನೋಡು, ಈ ಕಾಡು ಹೂ ಎಷ್ಟು ಅಂದವಾಗಿದೆ. ನೋಡು ಲಿಲ್ಲೀ.' ದಾರಿಯ ಪಕ್ಕದಲ್ಲಿ ಅರಳಿ ನಿಂತಿದ್ದ ಒಂದು

ಕಾಡು ಹೂವನ್ನು ನೋಡಿ ಪೀಟರ್ ಹೇಳಿದ. ಆದರೆ ಲಿಲ್ಲಿಯಿಂದ ಅವನಿಗೆ ಜವಾಬು ಸಿಗಲಿಲ್ಲ. ಆಗ ಅವನು ಹಿಂದಿರುಗಿ ನೋಡಿದ. ಹತ್ತು ಮಾರು ಗಳಷ್ಟು ಹಿಂದೆ ಲಿಲ್ಲಿಯೂ ಬಾಲನೂ ನಿಂತದ್ದು ಪೀಟರಿಗೆ ಗೋಚರಿಸಿತು. ಲಿಲ್ಲಿ ಉದಿಸಿಬರುತಿದ್ದ ನೇಸರನನ್ನು ನೋಡುತಿದ್ದಳು; ಬಾಲ ಲಿಲ್ಲಿಯ ಮೋರೆಯನ್ನು ನೋಡುತ್ತಾ ನಿಂತಿದ್ದ. ಬಾಲನ ಕಣ್ಣುಗಳಿಂದ ಲಿಲ್ಲಿಯ ವದನದ ಕಡೆಗೆ ಹರಿಯುತಿದ್ದ ಆ ನೋಟವನ್ನು ಕಾಣಲು ಪೀಟರಿನ ಮನದೊಳಗೆ ಒಂದು ಸಂದೇಹವು ಮೂಡಿತು. ಅವನು ಹೀಗೆ ಹೇಳಿದ. 'ಬಾಲ, ಲಿಲ್ಲೀ, ಏಕೆ ಹಿಂದೆ ನಿಂತು ಬಿಟ್ಟಿರುವಿರಿ? ಗುಡ್ಡವನ್ನು ಏರಿದು ದರಿಂದ ದಣಿದಿರೇ?'

'ಅಣ್ಣಾ, ಮೂಡಲು ಕಡೆಗೆ ನೋಡು.' ಲಿಲ್ಲಿ ಸೂರ್ಯ ಬಿಂಬ ದಿಂದ ತನ್ನ ಕಣ್ಣುಗಳನ್ನು ಅಣ್ಣನ ಕಡೆಗೆ ಹೊರಳಿಸಿದಳು.' ಉದಿಸಿ ಬರುವ ಸೂರ್ಯ ಎಷ್ಟು ಸೊಗಸಾಗಿ ತೋರುತಿದ್ದಾನೆ.'

ಪೀಟರ್ ನೇಸರು ಬಿಂಬವನ್ನು ನೋಡಿದ. ಅದರ ಹೊಳವು ಅವನ ಮನವನ್ನು ಆಕರ್ಷಿಸಿತು. ಕ್ಷಿತಿಜದಿಂದ ಮೇಲಕೆ ಹತ್ತಿ ಬರುತಿದ್ದ ರವಿ ಯನ್ನು ನೋಡುತ್ತಾ ಅವನು ನಿಂತ. ಎಲ್ಲರಿಗಿಂತಲೂ ಹಿಂದೆ ಬಿದ್ದಿದ್ದ ಅಡಿಗೆಯವನು ಬಂದು ತಲುಪಿದ. ನೇಸರು ಬಾನಿನಲ್ಲಿ ಮೇಲೇರುತಿದ್ದ. ಬಿಸಿಲಿನ ತೀಕ್ಷ್ಣತೆಯು ಹೆಚ್ಚತೊಡಗಿತು. ತಡವಾದರೆ ಗುಡ್ಡ ಏರುವ ಮುನ್ನ ಬಿಸಿಲಿನ ತಾಪವು ಹೆಚ್ಚುವುದೆಂದು ಪೀಟರ್ ತಿಳಿದ. ಆದುದ ರಿಂದ ಅವನು ಹೇಳಿದ. 'ನೀವು ಸೂರ್ಯ ಬಿಂಬವನ್ನು ನೋಡಿದುದು ಸಾಕು; ಬನ್ನಿ!'

ಅವರು ನೇಸರ ಬಿಂಬದಿಂದ ತಮ್ಮ ದೃಷ್ಟಿಗಳನ್ನು ತಿರುಗಿಸಿದರು. ಹೆಜ್ಜೆಗಳನ್ನು ಮುಂದಿಟ್ಟರು; ಹಾದಿಯಲ್ಲಿ ಮುಂದೆ ಸಾಗತೊಡಗಿದರು. ಬಿಸಿಲು ಹೆಚ್ಚಿದಂತೆ ಲಿಲ್ಲಿಯ ಮೋರೆಯ ಮೇಲೆ ಬೆವರು ಹನಿಗಳು ಮೂಡತೊಡಗಿದವು. ಕರವಸ್ತ್ರದಿಂದ ಮೋರೆಯ ಮೇಲಿನ ಬೆವರು ಹನಿಗಳನ್ನು ಒರೆಸಿಕೊಳ್ಳುತಿದ್ದಳವಳು. ಪಾಪ,- ಲಿಲ್ಲಿಗೆ ಹೆಚ್ಚು ದೂರ

ನಡೆದು ಪರಿಚಯುವಿರಲಿಲ್ಲ. ಆದುದರಿಂದ ಇತರರಿಗಿಂತ ಹೆಚ್ಚು ದಣಿ ವಾಯಿತು ಅವಳಿಗೆ.

ಬಿಸಿಲಿನ ತಾಪದಿಂದ ಲಿಲ್ಲಿಯ ಮೋರೆಯು ಬಾಡಿದುದನ್ನು ಬಾಲನು ನೋಡಿದ. ಅವಳ ಹಣೆಯ ಮೇಲೆ ಮುತ್ತಿನ ಮಣಿಗಳಂಥ ಬೆವರುಹನಿ ಗಳು ಗೋಚರಿಸಿದವು. ಅವಳ ಎದೆಯಿಂದ ದೀರ್ಘ ನಿಶ್ವಾಸಗಳು ಒರು ತಿದ್ದುದನ್ನು ಬಾಲ ಕಂಡ. ಲಿಲ್ಲಿ ಬಹಳ ದಣಿದಿರುವಳೆಂಬುದು ಬಾಲನಿಗೆ ತಿಳಿದಿತು. ಅವನು ಮರುಕದಿಂದ ಪ್ರಶ್ನಿಸಿದ 'ಏನು ಲಿಲ್ಲೀ, ದಣಿದಿ ಯೇನು?'

ತಾನು ದಣಿದಿರುವೆನೆಂಬುದನ್ನು ಅಷ್ಟು ಬೇಗನೆ ಒಪ್ಪಿಕೊಳ್ಳತಕ್ಕ ಹುಡಿಗಿಯಲ್ಲ ಲಿಲ್ಲಿ. ಅವಳಲ್ಲಿ ಆತ್ಮಾಭಿಮಾನವು ಧಾರಾಳವಾಗಿದ್ದಿತು. ದಣಿದು ದೀರ್ಘನಿಶ್ವಾಸಗಳನ್ನು ಬಿಡುತಿದ್ದರೂ, ತಾನು ದಣಿದಿರುವೆ ನೆಂದು ಒಪ್ಪಿಕೊಳ್ಳಲು ಅವಳು ತಯಾರಿರಲಿಲ್ಲ. ಕರವಸ್ತ್ರದಿಂದ ಮೋರೆ ಯಲ್ಲಿ ಹರಿಯುತಿದ್ದ ಬೆವರನ್ನು ಒರೆಸಿಕೊಂಡಳು. ಆ ಮೇಲೆ ಅವಳು ಹೇಳಿದಳು. 'ಏನು ಬಾಲ, ದಣಿಯಲು ನಾನು ಪುಟ್ಟ ಮಗುವೆಂದು ತಿಳಿದಿರುವೆಯೇನು?'

'ಲಿಲ್ಲೀ, ನಿನಗೆ ದಣಿವಾಗಿದ್ದರೆ ಈ ಮರದ ನೆರಳಿನಲ್ಲಿ ಕುಳಿತು ತುಸ ವಿಶ್ರಾಂತಿಯನ್ನು ಪಡೆಯುವಾ.' ಎಂದ ಪೀಟರ್.

'ನನಗೆ ಆಯಾಸವೇನೂ ಆಗಲಿಲ್ಲ ಅಣ್ಣಾ.' ಎಂದಳು ಲಿಲ್ಲಿ.

'ನಿನ್ನ ಬಾಡಿದ ಮೋರೆಯನ್ನು ನೋಡಿದೊಡನೆಯೇ ನೀನು ದಣಿ ದಿರುವಿಯೆಂಬುದು ವ್ಯಕ್ತವಾಗುತ್ತದೆ. ಲಿಲ್ಲೀ, ಮತ್ತೇಕೆ ಈ ಹಟ?' ಈ ನುಡಿಗಳನ್ನಾಡಿದವನು ಬಾಲನಾಗಿದ್ದ.

'ಈ ಮರದ ನೆರಳಿನಲ್ಲಿ ತುಸ ಕುಳಿತುಕೊಳ್ಳುವಾ. ಹಾದಿಯ ಪಕ್ಕದಲ್ಲಿ ಬೆಳೆದುನಿಂತಿದ್ದ ಒಂದು ಮರದ ನೆರಳಿನಲ್ಲಿ ಕುಳಿತುಕೊಂಡ ಪೀಟರ್.

ಅವನ ಪಕ್ಕದಲ್ಲಿಯೇ ಬಾಲ ಆಸೀನನಾದ. ಸ್ವಲ್ಪದೂರದಲ್ಲಿ ಲಿಲ್ಲಿ

ಮುಂಡಿಸಿದಳು. ಎಲ್ಲರಿಗಿಂತಲೂ ಹೆಚ್ಚಿಗೆ ದಣಿದಿದ್ದವನು ಅಡಿಗೆ ಹುಡುಗ ಕೋವೂ. ಅವನು ತನ್ನ ತಲೆಯಿಂದ ಹೊರೆಯನ್ನಿಳಿಸಿದ. ಅವನ ಮೋರೆ ಯಿಂದ ಒಂದೇಸವನೆ ಬೆವರು ಹರಿಯುತಿದ್ದಿತು. ಮುಖವು ಕೆಂಪಾಗಿ ದ್ದಿತು. ಅವನು ಹೊರೆಯನ್ನು ಕೆಳಕ್ಕಿಳಿಸಿ ಉಸ್ಸೆಂದು ಒಂದು ಶ್ವಾಸ ವನ್ನು ಹೊರಚೆಲ್ಲಿ ಮರದ ನೆರಳಿನಲ್ಲಿ ಬಿದ್ದುಕೊಂಡ. ಅವನ ಬಳಲಿಕೆ ಯನ್ನು ಕಾಣುವಾಗ ಲಿಲ್ಲಿಯ ಎದೆಯಲ್ಲಿ ಮರುಕ ಹುಟ್ಟಿತು. ಅವಳು ತನ್ನ ದಣಿವನ್ನು ಮರೆತು ಹೇಳಿದಳು. 'ನೋಡು ಬಾಲ, ಕೋವುನ ಅವಸ್ಥೆಯನ್ನು! ನಮ್ಮೆಲ್ಲರಿಗಿಂತ ಹೆಚ್ಚು ಅವ ದಣಿದಿದ್ದಾನೆ. ಹೊರಲು ಅವನಿಗೆ ಅಷ್ಟು ಸಾಮಾನುಗಳನ್ನು ಕೊಡಬಾರದಿತ್ತು.'

'ಹಾಗಾದರೆ ಅವನ ಹೊರೆಯನ್ನು ನೀನು ತೆಗೆದುಕೋ.'

• 'ಲಿಲ್ಲಿ ಕರವಸ್ತ್ರದಿಂದ ತನ್ನ ಮೋರೆಯನ್ನು ಒರೆಸಿಕೊಂಡಳು. ಸ್ವಲ್ಪ ಸಮಯದವರೆಗೆ ಎಲ್ಲರೂ ಮೌನದಿಂದಿದ್ದರು; ತಮ್ಮ ಆಯಾಸ ವನ್ನು ಪರಿಹರಿಸಿಕೊಳ್ಳುತಿದ್ದರು.

ಹತ್ತು ನಿಮಿಷಗಳು ಕಳೆದವು. ಮರದ ನೆರಳಿಂದ ಏಳಲೆತ್ನಿಸುತ್ತಾ ಪೀಟರ್ ಹೇಳಿದ. 'ಲಿಲ್ಲೀ, ಹೀಗೆ ಕುಳಿತರಾಗದು. ಬೆಟ್ಟದ ತುದಿಗೆ ಇನ್ನೂ ಮೂರು ಮೈಲುಗಳಷ್ಟು ದೂರವಿದೆ. ಈಗಲೇ ಹತ್ತು ತಾಸಾ ಗಿದೆ. ಹನ್ನೊಂದು ಆಗುವುದಕ್ಕೆ ಮುನ್ನ ನಾವು ಗುಡ್ಡದ ತುದಿಗೆ ತಲುಪಬೇಕು.'

ಅಣ್ಣನ ಮಾತುಗಳನ್ನು ಕೇಳಿ ಲಿಲ್ಲಿ ಎದ್ದುನಿಂತಳು. ತನ್ನ ಕಣ್ಣು ಗಳನ್ನು ಬಾಲನ ಕಡೆಗೆ ಹೊರಳಿಸಿದಳು 'ಏನು ಬಾಲ, ಹೋಗೋಣವೇ?'

'ಹೂಂ. ನನ್ನ ಅಡ್ಡಿಯೇನೂ ಇಲ್ಲ. ನೀನು ದಣಿದಷ್ಟು ನಾನು ದಣಿ ದಿಲ್ಲ' ಈ ಉತ್ತರವಾಗಿತ್ತು ಲಿಲ್ಲಿಗೆ ಬಾಲನಿಂದ ದೊರೆಕಿದುದು. ಅವನೂ ಕುಳಿತಲ್ಲಿಂದ ಎದ್ದುನಿಂತ.

'ಕೋವೂ!' ಲಿಲ್ಲಿ ಅಡಿಗೆಯವನನ್ನು ಕರೆದಳು.

'ಏಕೆ?' ಎಂದು ಪೀಟರ್ ಪ್ರಶ್ನಿಸಿದ.

'ಪಾಪ, ಅವನಿಗೆ ಎಲ್ಲಾ ಸಾಮಾನುಗಳನ್ನು ಹೊತ್ತುಕೊಂಡು ನಡೆಯಲಾಗುವುದಿಲ್ಲ. ಬಹಳ ದಣಿದ್ದಾನೆ. ಅವನ ಕೈಯಿಂದ ಹಣ್ಣು ಹಂಪಲುಗಳ ಬುಟ್ಟಿಯನ್ನು ಇಸಕೊಳ್ಳುವೆ.'

'ನಿನ್ನ ದೇಹವನ್ನು ತೆಗೆದುಕೊಂಡು ನಡೆಯುವುದೇ ನಿನಗೆ ಪ್ರಯಾಸವಾಗಿದೆ. ಇನ್ನು ಆ ಬುಟ್ಟಿಯನ್ನು ತೆಗೆದುಕೊಂಡು ನೀನು ನಡೆಯುವುದು ಹೇಗೆ?' ಈ ಮಾತುಗಳು ಬಾಲನ ನಾಲಗೆಯಿಂದ ಉದುರಿದವು.

'ಏನು ಬಾಲ,' ಲಿಲ್ಲಿ ತನ್ನ ಕಣ್ಣುಗಳನ್ನು ಬಾಲನ ಕಡೆಗೆ ತಿರುಗಿಸಿದಳು. 'ಒಂದು ಪುಟ್ಟ ಬುಟ್ಟಿಯನ್ನು ತೆಗೆದುಕೊಂಡು ನಡೆಯಲು ನನ್ನಿಂದಾಗದೇ? ಕೋಮಾ, ಎಲ್ಲಿ ಆ ಹಣ್ಣು ಹಂಪಲುಗಳ ಬುಟ್ಟಿ? ಅದನ್ನು ಇತ್ತಕೊಡು.'

ಕೋಮನಿಗೆ ಅಷ್ಟೇ ಬೇಕಾದುದು; ತನ್ನ ಹೊರೆಯಿಂದ ಒಂದು ಬುಟ್ಟಿ ಹೋದರೆ ಆ ಭಾರವು ಕಡಿಮೆಯಾಗುವುದೆಂದು ಅವನು ವಿಚಾರಿಸಿದ. ತನ್ನ ಮೂಟೆಯನ್ನು ಅವನು ಬಿಚ್ಚಿದ; ಅದರಿಂದ ಹಣ್ಣು ಹಂಪಲುಗಳ ಬುಟ್ಟಿಯನ್ನು ಹೊರತೆಗೆದುದಾಯಿತು. ಲಿಲ್ಲಿ ಆ ಬುಟ್ಟಿಯನ್ನು ತೆಗೆದುಕೊಂಡಳು.

'ಬುಟ್ಟಿಯನ್ನು ನಾನು ತೆಗೆದುಕೊಳ್ಳಬೇಕೆ?' ಬಾಲ ಪ್ರಶ್ನಿಸಿದ ಲಿಲ್ಲಿಯನ್ನು.

'ನಾನು ಒಂದು ಪುಟ್ಟ ಬುಟ್ಟಿಯನ್ನು ಹೊರಲು ಕೈಲಾಗದವಳೆಂದು ನೀನು ನೆನಸಿರುವೆಯಾ?'

'ಹಾಗಾದರೆ ನೀನೇ ಹೊರು.'

'ನೋಡು ಬಾಲ,' ಪೀಟರ್ ಹೇಳಿದ. 'ಇನ್ನೊಬ್ಬರ ತೊಂದರೆಗಳನ್ನು ಕಾಣುವಾಗ ಲಿಲ್ಲಿಗೆ ತುಂಬಾ ಪುರುಕ. ಅವರಿಗೆ ಸಹಾಯ ಮಾಡಲು ಅವಳು ಹಿಂದು ಮುಂದು ನೋಡುವವಳಲ್ಲ.'

ಅವರು ಮುಂದೆ ಅಡಿಗಳನ್ನಿಟ್ಟರು. ಬುಟ್ಟಿಯನ್ನು ಕೈಯಲ್ಲಿ

ಹಿಡಿದುಕೊಂಡಳು ಲಿಲ್ಲಿ. ಪೀಟರ್ ಒಂದೊಂದು ವಿಷಯಗಳನ್ನು ಕುರಿತು ಮಾತಾಡುತ್ತಿದ್ದ. ಅವನು ಹೇಳುವುದನ್ನು ಆಲಿಸುತ್ತ ಬಾಲ ಹಿಂಬಾಲಿಸುತಿದ್ದ. ಆಗಾಗ ಅವ ಬುಟ್ಟಿಯನ್ನು ತೆಗೆದುಕೊಳ್ಳಲಾಗದಿದ್ದರೆ ತನ್ನ ಕೈಗೆ ಕೊಡೆಂದು ಲಿಲ್ಲಿಗೆ ಹೇಳದಿರುತ್ತಿರಲಿಲ್ಲ. ಆದರೆ ಲಿಲ್ಲಿ ಅದಕ್ಕೆ ಒಪ್ಪಲಿಲ್ಲ; ಬುಟ್ಟಿಯನ್ನು ತಾನೇ ತೆಗೆದುಕೊಂಡು ನಡೆಯುತಿದ್ದಳು.

ಬಿಸಿಲೇರತೊಡಗಿತು. ಅದರೊಡನೆ ದಾರಿಗರ ದಣಿವು ಹೆಚ್ಚತೊಡಗಿತು. ಕಡಿದಾದ ಒಂದು ಗುಡ್ಡವಾಗಿದ್ದಿತು ಅವರು ಏರುತಿದ್ದುದು. ಆದುದರಿಂದ ಜಾಗ್ರತೆಯಾಗಿ ತೆರಳಲಾಗುತ್ತಿರಲಿಲ್ಲ ಅವರಿಗೆ. ಮೆಲ್ಲಗೆ ಹೆಜ್ಜೆಗಳನ್ನಿಡುತಿದ್ದರು. ಬುಟ್ಟಿಯನ್ನು ಹೊತ್ತುಕೊಂಡು ನಡೆಯುವುದು ಲಿಲ್ಲಿಗೆ ಅತ್ಯಂತ ಪ್ರಯಾಸವಾಗಿ ತೋರತೊಡಗಿತು. ಆದರೂ ಆಕೆ ತನ್ನ ಹಟವನ್ನು ಬಿಡಲಿಲ್ಲ. ಆಗಾಗ ಮೋರೆಯಿಂದ ಹರಿಯುತಿದ್ದ ಬೆವರನ್ನು ಕರವಸ್ತ್ರದಿಂದ ಒರಸಿಕೊಳ್ಳುತ್ತಾ, ಪೀಟರ್ ಮತ್ತು ಬಾಲ ಇವರ ಜೊತೆಯಲ್ಲಿ ನಡೆಯಲು ಅವಳು ಪ್ರಯತ್ನಿಸುತಿದ್ದಳು. ಬುಟ್ಟಿಯನ್ನು ತೆಗೆದುಕೊಂಡು ಲಿಲ್ಲಿಗೆ ನಡೆಯಲಾಗುವುದಿಲ್ಲವೆಂಬುದು ಬಾಲನಿಗೆ ಗೊತ್ತು. ಆದರೆ ಸ್ವಾಭಿಮಾನವಿದ್ದ ಆ ಹುಡುಗಿ ಬುಟ್ಟಿಯನ್ನು ಬಾಲನಿಗೆ ಕೊಡುವಂತಿರಲಿಲ್ಲ.

ತಂಗಿ ಹಿಂದೆ ಬೀಳುತಿದ್ದುದನ್ನು ಪೀಟರ್ ಕಾಣದಿರಲಿಲ್ಲ. ಬುಟ್ಟಿಯನ್ನು ಹೊತ್ತುಕೊಂಡು ಅವಳಿಗೆ ನಡೆಯಲಾಗುವುದಿಲ್ಲವೆಂಬುದು ಅವನಿಗೆ ತಿಳಿದಿತ್ತು. ಅವಳು ಬಹಳ ದಣಿದಿದ್ದಳು; ಆದರೆ ತನ್ನ ಹಟವನ್ನು ಬಿಡಳು. ಅವಳು ಸಾವಕಾಶದಿಂದ ನಡೆಯಲೆಂದು ತನ್ನ ಚಲನೆಯನ್ನು ಮೆಲ್ಲನೆ ಮಾಡಿದ ಪೀಟರ್.

ಬಾಲ ಹೇಳಿದ ಲಿಲ್ಲಿಗೆ. 'ನೋಡು ಲಿಲ್ಲೀ, ಬುಟ್ಟಿಯನ್ನು ತೆಗೆದುಕೊಂಡು ನಿನಗೆ ನಡೆಯಲಾಗುವುದಿಲ್ಲ. ಆದುದರಿಂದಲೇ ನೀನು ಎಲ್ಲರಿಗಿಂತಲೂ ಹಿಂದೆ ಆಗಿರುವೆ.

ಲಿಲ್ಲಿ ತನ್ನ ಸೋಲನ್ನು ಒಪ್ಪಿಕೊಳ್ಳತಕ್ಕ ಹುಡುಗಿಯಲ್ಲ. ಅವಳು ಹೇಳಿದಳು. 'ನೀವು ಗಂಡಸರು ನಡೆದು ಅಭ್ಯಾಸವಿದೆ. ಆದುದರಿಂದ

ಬೇಗ ನಡೆಯುತ್ತೀರಿ. ನಿಮಗೆ ಆತುರವಿದ್ದರೆ ಮುಂದೆ ಹೋಗಿ. ನಾನೂ ಕೋಮಸೂ ಒಟ್ಟಿಗೆ ಬರುವೆವು.'

'ಸಿಟ್ಟು ಮಾಡಿಕೊಳ್ಳಬೇಡ ಲಿಲ್ಲೀ,' ಬಾಲ ನುಡಿದ. 'ಆದರೆ ನೀನೇಕೆ ಹೀಗೆ ಕೊಂಕಣ ಸುತ್ತುವುದು? ನಿನಗೆ ಬುಟ್ಟಿಯನ್ನು ತೆಗೆದು ಕೊಂಡು ನಡೆಯಲಾಗುವುದಿಲ್ಲ. ಅದನ್ನು ನನ್ನ ಕೈಗೆ ಕೊಡಬಾರದೆ? ಅದರಲ್ಲಿರುವ ಹಣ್ಣು ಹಂಪಲಗಳನ್ನು ನಾನೇನು ತಿಂದು ಹಾಕುವುದಿಲ್ಲ!'

ಬಾಲ ಲಿಲ್ಲಿಯ ಕೈಯಿಂದ ಬುಟ್ಟಿಯನ್ನು ಇಸಕೊಳ್ಳದೆ ಬಿಡುವಂತಿಲ್ಲ; ಲಿಲ್ಲಿ ಅದನ್ನು ಕೊಡಳು. ಅವರಿಬ್ಬರೂ ಮಾತಾಡಿದರು; ವಾಗ್ವಾದ ನಡೆಸಿದರು. ಅವರಿಬ್ಬರ ಈ ಕಲಹವನ್ನು ಕಂಡು ಪೀಟರ್ ನಗತೊಡಗಿದ. ಹಿಂದೆ ಬಿದ್ದಿದ್ದ ಕೋಮಸೂ ಬಂದು ಅವರ ಜೊತೆಗೆ ಸೇರಿದ.

'ಲಿಲ್ಲೀ, ಅನಾವಶ್ಯಕವಾಗಿ ಈ ತೊಂದರೆ ತೆಗೆದುಕೊಳ್ಳುವುದೇಕೆ? ನನ್ನ ಕೈಗೋ ಬಾಲನ ಕೈಗೋ ಬುಟ್ಟಿಯನ್ನು ಕೊಡಬಾರದೇ?' ಪೀಟರ್ ಹೇಳಿದ.

'ಲಿಲ್ಲೀ, ನನ್ನೊಡನೆಯೂ ಈ ಹಟವೇಕೆ?' ಬಾಲ ಅಂದ.

ಕೊನೆಗೆ ಲಿಲ್ಲಿ ಹಣ್ಣು ಹಂಪಲಗಳ ಬುಟ್ಟಿಯನ್ನು ಕೊಟ್ಟಳು. ಬಾಲ ಅದನ್ನು ಸ್ವೀಕರಿಸಿದ. ಬುಟ್ಟಿಯ ಭಾರವು ಇಲ್ಲದಾಗಲು ನಡೆಯುವುದು ಅವಳಿಗೆ ಅಷ್ಟು ಪ್ರಯಾಸವಾಗಿ ತೋರಲಿಲ್ಲ. ಎಲ್ಲರ ಜೊತೆಯಲ್ಲಿ ಅವಳೂ ನಡೆದಳು.

ಗುಡ್ಡದ ತುದಿಗೆ ಸೇರಿದಾಗ ಹನ್ನೊಂದು ತಾಸಾಗಿದ್ದಿತು. ವಿಶಾಲವಾದ ಮೈದಾನದಂತಿದ್ದಿತು ಅದು. ಅಲ್ಲಲ್ಲಿ ಮರಗಳು; ಪೊದರುಗಳು; ಕಲ್ಬಂಡೆಗಳು. ಒಂದು ಪುಟ್ಟ ತೋಡು ಅಲ್ಲಿ ಹರಿಯುತಿದ್ದಿತು. ಅಲ್ಲಿ ಹರಡಿದ್ದ ಕಲ್ಬಂಡೆಗಳ ಮೇಲೇರಿ ನೆಗೆಯುತ್ತಾ ಕಲಕಲಗಾನವನ್ನು ಹಾಡುತಿದ್ದಿತು. ಮರಗಳಿಂದ ಮರಗಳಿಗೆ ಒಂದೆರಡು ಮಂಗಗಳು ಹಾರುತಿದ್ದವು.

ಅವರಿಗೆ ಆಯಾಸವಾಗಿತ್ತು. ಎಲ್ಲರೂ ದಣಿದಿದ್ದರು. ತೋಡಿನ ತೀರದಲ್ಲಿದ್ದ ಒಂದು ಮರದ ನೆರಳನ್ನು ಅವರು ಆಶ್ರಯಿಸಿದರು. ಲಿಲ್ಲಿ ತೋಡಿನಲ್ಲಿ ಹರಿಯುತಿದ್ದ ತಣ್ಣೀರಿನಿಂದ ಬೆವರಿದ ತನ್ನ ಕೈಕಾಲು ಮೊಗ ಗಳನ್ನು ತೊಳೆದುಕೊಂಡಳು; ಸಿಹಿನೀರಿನಿಂದ ತನ್ನ ನೀರಡಿಕೆಯನ್ನು ಶಾಂತಪಡಿಸಿದಳು. ಇತರರೂ ನೀರಿಗಿಳಿದರು; ಕೈಕಾಲು ಮೋರೆಗಳನ್ನು ತೊಳೆದುಕೊಂಡರು; ಸಿಹಿನೀರಿನಿಂದ ತಮ್ಮ ಪಿಪಾಸೆಯನ್ನು ತಣಿಸಿದರು. ದಂಡೆಯ ಮೇಲೆ ಮೃದುವಾದ ಹಸಿರು ಹುಲ್ಲುಗಳ ಹಾಸಿಗೆ. ಅವರು ಅದರ ಮೇಲೆ ಆಸೀನರಾದರು. ಬೆಟ್ಟವನ್ನೇರಿ ಬಂದಾಗ ಉಂಟಾದ ಆಯಾಸವನ್ನು ಪರಿಹರಿಸತೊಡಗಿದರು. ತಂಗಾಳಿಯು ಬಂದು ಅವರ ದಣಿವನ್ನು ಆರಿಸತೊಡಗಿತು.

ಕೆಲವು ನಿಮಿಷಗಳಲ್ಲಿಯೇ ಅವರ ಆಯಾಸವು ಇಲ್ಲದಾಯಿತು. ಅವರ ದೇಹಗಳಲ್ಲಿ ಉತ್ಸಾಹವು ತುಂಬಿತು. ಅವರು ಕುಳಿತಲ್ಲಿಂದ ಎದ್ದು ನಿಂತರು. ಪೀಟರ್ ಹೇಳಿದ. 'ನಾವು ಗುಡ್ಡವನ್ನು ಸುತ್ತಿ ಬರುವಾ. ಆ ಮೇಲೆ ಕಾಫಿ ಫಲಾಹಾರಗಳನ್ನು ತೆಗೆದುಕೊಳ್ಳಬಹುದು.'

ಲಿಲ್ಲಿ ಮತ್ತು ಬಾಲ ಇವರು ಪೀಟರಿನ ಸೂಚನೆಯನ್ನು ಒಪ್ಪಿದರು.

ಬೆಟ್ಟದ ತುದಿಯಲ್ಲಿ ನಿಂತು ನೋಡಿದರು. ತಲೆಗಳ ಮೇಲೆ ನೀಲಿಯ ಬಾನು. ಒಂದೆರಡು ಮುಗಿಲ ಹಡಗುಗಳು ತೇಲುತಿದ್ದವು. ದೂರದಲ್ಲಿ ಒಂದೆರಡು ಪರ್ವತಗಳ ಸಾಲುಗಳು; ಬೆಟ್ಟಗಳ ತೊಪ್ಪಲುಗಳಲ್ಲಿ ಹರಿವ ಹೊಳೆಗಳು. ಗದ್ದೆಗಳು; ಒಯಲುಗಳು. ಇವುಗಳೆಲ್ಲಾ ಅವರ ಕಣ್ಣುಗಳಿಗೆ ಗೋಚರಿಸಿದವು. ಸಸ್ಯಶಾಲಿನಿಯಾದ ಭೂರಮೆಯ ಸೌಂದರ್ಯವನ್ನು ಅವರು ದರ್ಶಿಸಿದರು.

ಸುಯ್ಯೆಂದು ಗಾಳಿ ಬಂದಿತು. ಲಿಲ್ಲಿಯ ತಲೆಗೂದಲುಗಳು ಕೆದರಿ ದವು. ಹಣೆಯ ಮೇಲೆ ಬಿದ್ದ ಕೂದಲುಗಳನ್ನು ಸರಿಪಡಿಸಿಕೊಂಡಳವಳು. ತನ್ನ ಕಣ್ಣುಗಳ ಮುಂದೆ ವಿಶಾಲವಾದ ಭೂಮಿ ಸಸ್ಯಸಮೃದ್ಧಿಯೊಡನೆ ನಿಂತಿರುವುದನ್ನು ಕಾಣಲು ಅವಳ ಮೋರೆಯು ಪ್ರಫುಲ್ಲಿತವಾಯಿತು. ಸೃಷ್ಟಿಸೌಂದರ್ಯ ದರುಶನದಿಂದ ಅವಳ ಎದೆಯು ಅರಳಿತು. ದೂರದ

ಕಣಿವೆಯಲ್ಲಿ ಹರಿಯುತ್ತಿದ್ದ ಒಂದು ಹೊಳೆಯನ್ನು ನೋಡಿದಳು. ಬಿಸಿಲು ನೀರಿನ ಮೇಲೆ ಬಿದ್ದುದರಿಂದ ಹೊಳೆಯು ಬೆಳ್ಳಿಯಂತೆ ಬೆಳಗುತ್ತಿದ್ದು ದನ್ನು ಅವಳು ನೋಡಿದಳು. ಅವರು ಅಲ್ಲಿನ ರಮಣೀಯ ನೋಟವನ್ನು ನೋಡಿ ಆನಂದಿಸಿದರು. ಗುಡ್ಡವನ್ನೇರಿದಾಗ ತಮಗೆ ಉಂಟಾದ ಆಯಾಸವನ್ನು ಅವರು ಮರೆತರು.

ಗುಡ್ಡವನ್ನು ಸುತ್ತಿ ಸಂಚರಿಸಿದುದಾಯಿತು. ತುತ್ತಿನ ಚೀಲಗಳು ಒರಿದಾಗತೊಡಗಿದವು. ಒಳಗಿನಿಂದ ಹಸಿವಿನ ಗರ್ಜನೆಯನ್ನು ಅವರು ಕೇಳತೊಡಗಿದರು. ಪೀಟರ್ ಹೇಳಿದ 'ಸಾಕು, ಹಸಿವೆಯಾಗುತ್ತದೆ; ತೊರೆಯದಂಡೆಗೆ ಮರಳುವಾ.'

ಎಲ್ಲರಿಗಿಂತ ಹೆಚ್ಚು ಹಸಿದಿದ್ದಳು ಲಿಲ್ಲಿ. ಅವಳು ಅಣ್ಣನ ಸುದಿಗೆ ಒಪ್ಪಿದಳು. ಬಾಲನ ಕಡೆಗೆ ಕಣ್ಣುಗಳನ್ನು ಹೊರಳಿಸಿದಳು. 'ಬಾಲ, ಹೋಗುವಾ. ನನಗೆ ಹಸಿವಾಗುತ್ತದೆ.'

'ಹೂಂ, ಸರಿ'

ಮೂವರೂ ತೊರೆಯದಂಡೆಯನ್ನು ಸೇರಿದರು. ಅಡಿಗೆಯವನು ತನ್ನ ಮೂಟೆಯನ್ನು ಬಿಚ್ಚಿ ಆಹಾರ ಪದಾರ್ಥಗಳನ್ನು ಭಕ್ಷಿಸಲು ಸರಿ ಪಡಿಸುತ್ತಿದ್ದ. ಕೆಲವು ರೊಟ್ಟಿಗಳು; ಬಿಸ್ಕೀಟುಗಳು; ಕೇಕುಗಳು. ಬುಟ್ಟಿ ಯೊಳಗಿನ ಹಣ್ಣು ಹಂಪಲುಗಳು. ದೊಡ್ಡದಾದ ಒಂದು ಥರ್ಮಾಫ್ಲಾಸ್ಕ. ಅದರಲ್ಲಿ ತುಂಬಾ ಕಾಫಿ.

ಎಲ್ಲರು ಹೊಳೆಯ ದಂಡೆಯ ಮೇಲೆ ಬೆಳೆದಿದ್ದ ಹುಲ್ಲು ಹಾಸಿಗೆಯ ಮೇಲೆ ಕುಳಿತುಕೊಂಡರು. ಅಡಿಗೆಯವನು ತಿಂಡಿ ಸಾಮಾನುಗಳನ್ನು ಕಾಗದದ ಚೂರುಗಳ ಮೇಲಿಟ್ಟು ಎಲ್ಲರ ಮುಂದೆಯೂ ತಂದಿರಿಸಿದ. ಮೂವರೂ. ಫಲಹಾರಗಳನ್ನು ಭಕ್ಷಿಸತೊಡಗಿದರು.

ಬಾಲ ಬಾಳೆಹಣ್ಣುಗಳನ್ನು ಸುಲಿದ ಮೇಲೆ ಸಿಪ್ಪೆಗಳನ್ನು ಲಿಲ್ಲಿಯ ಕಡೆಗೆ ಎಸೆದ. ಅವು ಒಂದು ಲಿಲ್ಲಿಯ ತಲೆಯ ಮೇಲೆ ಹತ್ತಿ ಕುಳಿತು ಕೊಂಡವು. ಹಣ್ಣುಗಳ ಸಿಪ್ಪೆಗಳು ತನ್ನ ತಲೆಯ ಮೇಲೆ ಬಿದ್ದುದು ಲಿಲ್ಲಿಗೆ

ತಿಳಿಯಲಿಲ್ಲ. ತಂಗಿಯ ತಲೆಯನ್ನು ಸಿಪ್ಪೆಗಳು ಅಲಂಕರಿಸಿದುದನ್ನು ನೋಡಿ ಪೀಟರ್ ಹೇಳಿದ. 'ಏನು ಲಿಲ್ಲೀ, ಬಾಳೆಹಣ್ಣಿನ ಸಿಪ್ಪೆ ಮುಡಿದು ಕೊಳ್ಳುವುದು ಅಲಂಕಾರವೆಂದು ತಿಳಿದಿರುವೆಯಾ?'

'ಎಲ್ಲಿ?' ತನ್ನ ತುರುಬಿನ ಮೇಲೆ ಕೈಯಾಡಿಸುತ್ತಾ ಲಿಲ್ಲಿ ಹೇಳಿದಳು.

'ನೋಡು ನಿನ್ನ ನೆತ್ತಿಯ ಮೇಲೆ!'

ನೆತ್ತಿಯನ್ನು ಲಿಲ್ಲಿ ಮುಟ್ಟಿನೋಡಿದಳು. ಬಾಳೆಹಣ್ಣಿನ ಸಿಪ್ಪೆಗಳು ಅವಳ ಕೈಗೆ ದೊರೆತವು. ಅವನ್ನು ತೆಗೆದು ದೂರ ಎಸೆದಳು. ಅವಳು ಅರ್ಧ ತಿಂದು ಮುಗಿಸಿದ್ದ ರೊಟ್ಟಿಯನ್ನು ತೆಗೆದುಕೊಂಡಳು. ಬಾಲ ತಾನು ಯಾವುದನ್ನೂ ತಿಳಿಯದವನಂತೆ ರೊಟ್ಟಿ ತಿನ್ನುವುದರಲ್ಲಿ ನಿರತನಾಗಿದ್ದ. ತನ್ನ ತಲೆಯಮೇಲೆ ಬಾಳೆಹಣ್ಣಿನ ಸಿಪ್ಪೆಗಳನ್ನು ಮಡಗಿದಾತ ಬಾಲನೇ ಇರಬೇಕೆಂದು ಲಿಲ್ಲಿಯ ಊಹೆ. ಅವನಲ್ಲದೆ ಬೇರೆ ಯಾರೂ ಈ ಕುಚೇಷ್ಟೆಗೆ ಕೈ ಹಾಕರು ಎಂದು ಅವಳ ನಂಬಿಕೆ.

ಕೆಲವು ನಿಮಿಷಗಳು ಗತಿಸಿದವು. ಬಾಲ ಟಂಬ್ಲರಿನಲ್ಲಿದ್ದ ಕಾಫಿಯನ್ನು ಕುಡಿಯುತಿದ್ದ. ಏನೋ ಒಂದು ಬಂದು ಅವನ ಮುಖಕ್ಕೆ ತಗಲಿತು. ಅವನ ಕಣ್ಣುಗಳು ಉರಿದಂತಾದವು. ಅವನು ತನ್ನ ಟಂಬ್ಲರಿನಿಂದ ಮೋರೆಯನ್ನು ಮೇಲಕ್ಕೆತ್ತಿದ. ಒಂದು ಕಿತ್ತಳೆಹಣ್ಣಿನ ಸಿಪ್ಪೆಯು ಅವನ ಮುಖದಿಂದ ಕೆಳಕ್ಕೆ ಉದುರಿದುದನ್ನು ಬಾಲ ನೋಡಿದ. ಕಣ್ಣುಗಳು ಉರಿಯುತಿದ್ದುದರಿಂದ ಕರವಸ್ತ್ರವನ್ನು ತೆಗೆದು ಕಣ್ಣುಗಳನ್ನು ಒರೆಸಿಕೊಂಡ. ಬಾಲನ ಈ ಅವಸ್ಥೆಯನ್ನು ಕಂಡು ಪೀಟರ್ ನಗತೊಡಗಿದ. ಲಿಲ್ಲಿಯ ಕಣ್ಣುಗಳು ಅವಳು ಕೈಯಲ್ಲಿ ಹಿಡಿದಿದ್ದ ಟಂಬ್ಲರನ್ನು ನೋಡುತಿದ್ದವು. ಅಲ್ಲಿ ಒಂದು ಮೃದುಹಾಸ ಮಿನುಗುತಿದ್ದುದನ್ನು ಬಾಲ ಕಾಣದಿರಲಿಲ್ಲ. ಕುಚೇಷ್ಟೆಯಲ್ಲಿ ಲಿಲ್ಲಿ ತನ್ನನ್ನು ಮೀರಿದವಳೆಂಬುದು ಬಾಲನಿಗೆ ತಿಳಿದಿತು.

'ಬೇಷ್ ಲಿಲ್ಲಿ! ನೀನು ಬಾಲನನ್ನು ಸೋಲಿಸಿದೆ.' ಪೀಟರ್ ಒಂದು ಬಿಸ್ಕೇಟನ್ನು ಕೈಯಲ್ಲಿ ಹಿಡಿದುಕೊಂಡ ನುಡಿದ.

'ಸಾಕು ಮಾಡು ನಿನ್ನ ನಗುವನ್ನು!' ಎಂದ ಬಾಲ.

ಬಾಲ ಕೈಯಲ್ಲಿ ಹಿಡಿದ ಬಿಸ್ಕೇಟನ್ನು ಪೀಟರಿನ ಮುಖಕ್ಕೆ ಎಸೆದ. ಪೀಟರ್ ತನ್ನ ಕರದಲ್ಲಿದ್ದ ಕಾಫಿ ಟಂಬ್ಲರನ್ನು ಚಾಚಿದ. ತನ್ನ ಮೇಲೆ ಕಾಫಿಯನ್ನು ಸುರಿಯಲು ಪೀಟರ್ ಹೊರಟಿರುವನೆಂಬುದನ್ನು ತಿಳಿಯಲು ಬಾಲನಿಗೆ ಸ್ವಲ್ಪ ದಿಗಿಲಾಯಿತು. ಅವನು ಪೀಟರನ್ನು ತಡೆಯುತ್ತಾ ಹೇಳಿದ. 'ಬೇಡ ಪೀಟರ್ ಕಾಫಿಯನ್ನೆರಚಿ ನನ್ನ ಕೋಟು ಹಾಳು ಮಾಡಬೇಡ.'

ಬಾಲ ತನ್ನ ಮಾತುಗಳನ್ನು ಮುಗಿಸುವ ಮುನ್ನ ಪೀಟರಿನ ಟಂಬ್ಲರಿನಲ್ಲಿದ್ದ ಕಾಫಿ ಬಾಲನ ಕೋಟಿನ ಮೇಲಾಯಿತು. ಆ ದ್ರವ ವಸ್ತುವಿನಿಂದ ಬಾಲನ ಕೋಟು ನೆನೆದಿತು. ಪೀಟರಿನ ಈ ಕೆಲಸದಿಂದ ಬಾಲನಿಗೆ ತುಸು ಸಿಟ್ಟು ಬಂದಿತು. ಅವನು ತನ್ನ ಟಂಬ್ಲರಿನಲ್ಲಿದ್ದ ಕಾಫಿಯನ್ನು ಕುಡಿದು ಮುಗಿಸಿರಲಿಲ್ಲ. ಟಂಬ್ಲರ್ ಹಿಡಿದಕೈಯನ್ನು ಮುಂದಕ್ಕೆ ಚಾಚಿದ. ಇನ್ನೊಂದು ನಿಮಿಷದಲ್ಲಿ ಆ ಟಂಬ್ಲರ್ ಬಂದು ಪೀಟರಿನ ಮೈಮೇಲೆ ಬಿದ್ದಿತು. ಅವನ ಅಂಗಿಯೆಲ್ಲಾ ನೆನೆದು ಕೊಳೆಯಾಯಿತು. ಅವನು ಫಲಾಹಾರದ ಬುಟ್ಟಿಯನ್ನು ತೆಗೆದುಕೊಂಡ. ಬಾಲ ಕಾಫಿ ತಂದ ಥರ್ಮಾಫ್ಲಾಸ್ಕನ್ನು ಹಿಡಿದ.

ಒಂದು ವೇಳೆ ಈ ಸರಸವು ವಿರಸದಲ್ಲಿ ಪರಿಣಮಿಸಬಹುದೆಂಬ ಹೆದರಿಕೆಯು ಲಿಲ್ಲಿಯ ಎದೆಯಲ್ಲಿ ಹುಟ್ಟಿತು. ಅವಳು ಪೀಟರಿನ ಕೈಯಿಂದ ಫಲಾಹಾರದ ಬುಟ್ಟಿಯನ್ನು ಕಿತ್ತುಕೊಂಡಳು. 'ಅಣ್ಣಾ, ಬೇಡ; ನಿಮ್ಮ ಆಟ ಇಷ್ಟಕ್ಕೆ ಸಾಕು. ನೀವಿಬ್ಬರೂ ಇಲ್ಲಿ ಹೊಡೆದಾಡುವಿರೆಂಬ ಹೆದರಿಕೆ ನನಗೆ. ಬಾಲ ಮಡಗು ಆ ಫ್ಲಾಸ್ಕನ್ನು.'

ಬಾಲ ಫ್ಲಾಸ್ಕನ್ನು ಕೆಳಗೆ ಮಡಗಿದ, ಎಲ್ಲರೂ ಪುನಃ ಫಲಾಹಾರ ಭುಂಜಿಸುವುದರಲ್ಲಿ ಉದ್ಯುಕ್ತರಾದರು.

ಪೀಟರಿನ ನೀರಡಿಕೆಯು ಅಡಗಿರಲಿಲ್ಲ. ಫ್ಲಾಸ್ಕಿನಲ್ಲಿ ಕಾಫಿ ಇರಬಹುದೆಂದು ಅದರ ಮುಚ್ಚಳವನ್ನು ತೆಗೆದು ನೋಡಿದ. ಆದರೆ ಅದರಲಿ

ಕಾಫಿ ಇರಲಿಲ್ಲ. ಅದು ಬರಿದಾಗಿದ್ದಿತು. ಅವನು ಬಾಲನ ಕಡೆಗೆ ಮೋರೆಯನ್ನು ತಿರುವಿ ನಗುತ್ತಾ ಹೇಳಿದ: ಈ ಹುಡಗಾಟದಲ್ಲಿ ಕಾಫಿಯನ್ನೆಲ್ಲಾ ಚೆಲ್ಲಿದೆವು. ನನ್ನ ನೀರಡಿಕೆಯೂ ತಣಿಯಲಿಲ್ಲ.

'ತೊರೆಯಲ್ಲಿ ಒಳ್ಳೆ ತಿಳಿನೀರು ಹರಿಯುತ್ತಲಿದೆ.' ತನ್ನ ಮುಂದಿದ್ದ ಬಿಸ್ಕೇಟುಗಳಿಂದ ಕಣ್ಣುಗಳನ್ನೆತ್ತದೆ ಬಾಲ ಜವಾಬು ಹೇಳಿದ.

'ಅಹುದು. ತೋಡಿನಲ್ಲಿರುವ ತಿಳಿನೀರಲ್ಲದೆ ಬೇರೆ ಯಾವ ಉಪಾಯವೂ ಇಲ್ಲ.'

ಫಲಾಹಾರಗಳನ್ನು ತಿಂದು ತುತ್ತಿನ ಚೀಲಗಳನ್ನು ತುಂಬಿದರು. ಮಿಕ್ಕಿದ ತಿಂಡಿಗಳನ್ನು ಅಡಿಗೆಯವನು ತನ್ನ ಹೊಟ್ಟೆಯಲ್ಲಿ ಜೋಪಾನ ಮಾಡಿದ. ಇತರರು ತೋಡಿಗಿಳಿದು ಕೈಬಾಯಿಗಳನ್ನು ತೊಳೆದುಕೊಂಡರು. ತಮ್ಮ ಹುಡುಗಾಟದಲ್ಲಿ ಕಾಫಿಯನ್ನು ಕಳೆದುದರಿಂದ ಅವರ ತೃಷೆಯನ್ನೂ ಅಡಗಿರಲಿಲ್ಲ. ಸಿಹಿ ನೀರನ್ನು ಕುಡಿದು ತಮ್ಮ ನೀರಡಿಕೆಯನ್ನು ಅವರು ತಣಿಸಿಕೊಂಡರು.

ಮೂವರು ಮರದ ನೆರಳಿಗೆ ಬಂದರು. ಬಾಲ ಜೇಬಿನಿಂದ ಒಂದು ಸಿಗರೇಟು ತೆಗೆದು ಹೊತ್ತಿಸಿದ. ಹೊಗೆಯನ್ನು ನೋಡುತ್ತಾ ಅವನು ತನ್ನ ಜೇಬಿನಿಂದ ಒಂದು ಪುಸ್ತಕವನ್ನು ಹೊರತೆಗೆದ.

'ಏನದು?' ಲಿಲ್ಲಿ ತನ್ನ ಕಣ್ಣುಗಳನ್ನು ಅಕಡೆ ಹೊರಳಿಸಿದಳು.

'ಒಂದು ಪುಸ್ತಕ.'

'ಏಕೆ ಮಹಾರಾಯ?' ಪೀಟರ್ ಸವಾಲು ಹಾಕಿದ.

'ಹೀಗೆ ಒಂದು ವಿನೋದ ಸಂಚಾರದಲ್ಲಿ ಯಾವುದಾದರೂ ಒಂದು ಮರದ ನೆರಳಿನಲ್ಲಿ ಕುಳಿತು ಓದುವುದು ಬಹು ಸೊಗಸು.'

'ಯಾವ ಪುಸ್ತಕವದು?

'ಪಯಣ' ಎಂದ ಬಾಲ.

'ಗಟ್ಟಿಯಾಗಿ ಓದು; ನಾನೂ ತುಸ ಕೇಳುವೆ.' ಬಾಲನ ಸನಿಯಕ್ಕೆ ಬಂದು ಕುಳಿತುಕೊಂಡಳು ಲಿಲ್ಲಿ.

ಪೀಟರ್ ಮರದಡಿಯಲ್ಲಿ ಮಲಗಿದ. ದಿಂಬಿಗೆ ಬದಲಾಗಿ ತನ್ನ ಎಡದ ತೋಳನ್ನು ತಲೆಯ ಅಡಿಯಲ್ಲಿ ಮಡಗಿಕೊಂಡು ಪೀಟರ್ ಹೇಳಿದ. 'ಪುಸ್ತಕವನ್ನು ಗಟ್ಟಿಯಾಗಿ ಓದು. ಈ ಬಿಸಿಲಲ್ಲಿ ನಡೆಯಲಾಗುವಂತಿಲ್ಲ. ಹೇಗಾದರೂ ಹೊತ್ತು ಹೋಗಬೇಕಲ್ಲ.'

'ಆದರೆ ಇದು ಕನ್ನಡ. ಇದನ್ನು ಓದುವುದರಿಂದ ನಿನಗೆ ತಲೆ ನೋವಾಗಬಹುದು.' ಬಾಲನಿಂದ ಈ ಉತ್ತರ ಬಂದಿತು.

ಬಾಲನ ನುಡಿಗಳನ್ನು ಕೇಳಲು ಲಿಲ್ಲಿಗೆ ನಗು ಬಂದಿತು. ಈ ಮಾತು ಗಳು ಅವಳ ತುಟಿಗಳಿಂದ ಹೊರಹರಿದವು. 'ತಮಾಷೆಗೆ ಹೊರಡಬೇಡ; ಏನಾದರೂ ಸ್ವಲ್ಪ ಓದು.'

'ಇಗೋ, ಪುಸ್ತಕ; ನೀನೇ ಓದು.' ಬಾಲ ಪಯಣವನ್ನು ಲಿಲ್ಲಿಯ ಕೈಗೆ ಕೊಟ್ಟ.

ಪುಸ್ತಕವನ್ನು ಬಿಚ್ಚಿ ನೋಡುತ್ತಾ ಲಿಲ್ಲಿ ಹೇಳಿದಳು 'ಇವು ಪದ್ಯ ಗಳು; ಪದ್ಯಗಳನ್ನು ನನಗೆ ಸರಿಯಾಗಿ ಓದ ಬರುವುದಿಲ್ಲ.'

'ನಿನಗೆ ತಿಳಿದಂತೆ ಓದು, ನಿನ್ನ ಹಾಡು ಕೇಳಲು ಇಲ್ಲಿ ಸಂಗೀತ ಕಚ್ಚೇರಿ ನಡೆಸಿಲ್ಲ.'

ಬಾಲನ ನಿರ್ಬಂಧದ ಮೂಲಕ ಲಿಲ್ಲಿಯೇ 'ಪಯಣ' ವನ್ನು ಓದ ಬೇಕಾಗಿ ಬಂದಿತು. ಅವಳು 'ಪಯಣ' ವನ್ನು ಬಿಚ್ಚಿದಳು. ಅದರಲ್ಲಿನ ಕವನಗಳ ತಲೆ ಬರಹಗಳನ್ನು ನೋಡುತ್ತಾ ಅವಳು ನುಡಿದಳು 'ಯಾವು ದನ್ನು ಓದಲಿ ಬಾಲ?'

'ನೋಡು ಅದರೊಳಗಿನ 'ಪ್ರೀತಿ' ಯನ್ನು ಓದು.' ಬಾಲನ ಸಲಹೆಯಾಗಿತ್ತು ಇದು.

ಲಿಲ್ಲಿ ಪುಸ್ತಕವನ್ನು ಬಿಚ್ಚಿ 'ಪ್ರೀತಿ' ಯನ್ನು ಅರಸತೊಡಗಿದಳು. ಅದು ಅವಳಿಗೆ ದೊರಕಿತು. ಲಿಲ್ಲಿ ತನ್ನ ಗಂಟಲನ್ನು ಸರಿಪಡಿಸಿಕೊಂಡಳು. ಗಟ್ಟಿಯಾಗಿ ಆ ಕವನವನ್ನು ಓದ ತೊಡಗಿದಳು. ಮೊದಲು ಕವನವನ್ನು ಸರಿಯಾಗಿ ಓದಲಾಗದೆ ಸ್ವಲ್ಪ ತಡವರಿಸಿದರೂ ಆ ಮೇಲೆ ಅದನ್ನು ಸೊಗಸಾಗಿಯೇ ಅವಳು ಓದಿದಳೆಂದೆನಬಹುದು. ಪೀಟರ್ ಮತ್ತು

ಬಾಲ ಇವರಿಬ್ಬರು ಲಿಲ್ಲಿ ಹಾಡುವುದನ್ನು ಕೇಳಿ ಅದರಲ್ಲಿ ತಲ್ಲೀನರಾದರು. ಕವನವು ಹೀಗೆ ಮುಕ್ತಾಯವಾಯಿತು.

ಹೃದಯದಿಂದ ಸೂಸಿ ಬಂದ
ನೀರಿನಲ್ಲಿ ಮೀಯಿಸುತ್ತ
ಜೀವನನ್ನು ಜೀವನದ
ಜ್ವಾಲೆಯಲ್ಲಿ ನೀರು ಮಾಡಿ
ಎರೆದೆ! ಆದರೇನು ಕಮಲ
ಮೊದಲಿನಂತೆ ಅರಳಲಿಲ್ಲ!
ಅದಕೆ ಬೇಕು ದೈವ—ಸ್ಪರ್ಶ,—
ಇನ್ನೆಲ್ಲಿ ನನ್ನ ದೈವ!

ಹೀಗೆ ಲಿಲ್ಲಿ 'ಪ್ರೀತಿ' ಯನ್ನು ಓದಿ ಮುಗಿಸಿದಳು. ಅವಳ ಸ್ವರವು ಬಹು ಇಂಪಾದುದು. ಆ ಹಾಡುಗಳಲ್ಲಿ ತಲ್ಲೀನನಾದ ಬಾಲ 'ಮಲ್ಲಿ ಕಾಲತೆ' 'ಹೆಣ್ಣು—ಗಂಡು' ಎಂಬಿತ್ಯಾದಿ ನಾಲ್ಕಾರು ಕವನಗಳನ್ನು ಅವಳು ಪಯಣದಲ್ಲಿ ಓದಿದಳು. ಬಾಲ ಆಕೆ ಹಾಡುವುದನ್ನು ಕೇಳುತ್ತಾ ಕುಳಿತ.

ಪೀಟರಿಗೆ ನಿದ್ದೆ ಹತ್ತಿತು. ಅವನು ರೆಪ್ಪೆಗಳನ್ನು ಮುಚ್ಚಿ ಗೊರಕೆ ಹೊಡೆಯ ತೊಡಗಿದ. ಅಡಿಗೆಯವನೂ ಸ್ವಲ್ಪ ದೂರದಲ್ಲಿ ಮಲಗಿ 'ಕುಂಭಕರ್ಣಸೇವೆ' ಯನ್ನು ಮಾಡುತಿದ್ದ. ಲಿಲ್ಲಿ ಕವನ ಓದುವುದನ್ನು ನಿಲ್ಲಿಸಿದಳು; ಬಾಲ ಅವಳ ಕಣ್ಣುಗಳನ್ನು ನೋಡಿದ. ಆ ಕಣ್ಣುಗಳಲ್ಲಿ ಮಿನುಗುತ್ತಿದ್ದ ಬೆಳಕನ್ನು ತನ್ನ ಎದೆಯಲ್ಲಿ ತುಂಬಲು ಅವನು ಪ್ರಯತ್ನಿಸಿದ. ಅವನ ಕರಗಳು ಮುಂದಕ್ಕೆ ಸರಿದವು; ಅವಳ ಎರಡು ಕೈಗಳನ್ನೂ ಹಿಡಿದುಕೊಂಡ. ಅವನ ಕೊರಳಿಂದ ಒಂದು ಮೃದು ಸ್ವರವು ಹೊರಟಿತು.

'ಲಿಲ್ಲೀ!'

ಲಿಲ್ಲಿ ತನ್ನ ಕೊರಳ ರವವನ್ನು ಅವನ ಸ್ವರದೊಂದಿಗೆ ಸೇರಿಸಲಿಲ್ಲ; ಅವನ ಹಿಡಿತದಿಂದ ತನ್ನ ಕೈಗಳನ್ನು ಬಿಡಿಸಿಕೊಳ್ಳಲೆತ್ನಿಸಲಿಲ್ಲ. ಅವಳ ದೃಷ್ಟಿಯು ಬಾಲನದರೊಡನೆ ಒಂದು ಗೂಡಿತು.

'ನನ್ನ ಲಿಲ್ಲಿ!' ಪುನಃ ಬಾಲ ನುಡಿದ.

'ಹೂಂ– ತನ್ನ ಹುಬ್ಬುಗಳನ್ನು ಮೇಲಕ್ಕೆತ್ತಿದಳು ಲಿಲ್ಲಿ.

'ಲಿಲ್ಲೀ, ನಿನಗಾಗಿ ನಾನು ಏನನ್ನು ಮಾಡಲೂ ಸಿದ್ಧನಿರುವೆ. ನೋಡು, ನೀನಿಲ್ಲದಿದ್ದರೆ ನನ್ನ ಬಾಳು ಹಾಳಾಗುವುದು. ನಿನ್ನೊಡನೆ ನಾನು ಕಳೆಯುತ್ತಿರುವ ಒಂದೊಂದು ನಿಮಿಷವೂ ಬಹು ಬೆಲೆಯುಳ್ಳದ್ದು. ನಿನ್ನೊಡನೆ ನಾಲ್ಕು ಮಾತಾಡುವುದರಲ್ಲಿ ನನಗೆ ಹರುಷವಿದೆ. ನನ್ನ ಮನದಲ್ಲಿ ಹೊಸ ಬೆಳಕನ್ನು ತುಂಬತಕ್ಕ ದೀಪವು ನೀನು!'

'ನನ್ನ ಬಾಲ!' ಆ ಮೇಲೆ ಬೇರೆ ನುಡಿಯು ಲಿಲ್ಲಿಯ ತುಟಿಗಳಿಂದ ಹೊರಬರಲಿಲ್ಲ. ಅವಳ ಎದೆಯಲ್ಲಿ ತುಂಬಿದ್ದ ಪ್ರೇಮವೆಲ್ಲ ಆ ಒಂದು ಮಾತಿನಲ್ಲಿ ತೇಲಿ ಹೊರಬಂದಿತು. ಆ ಒಂದು ಮಾತಿನ ಮೂಲಕ ತನ್ನ ಅಂತರಂಗವನ್ನು ಬಿಚ್ಚಿ ಲಿಲ್ಲಿ ಬಾಲನಿಗೆ ತೋರಿಸಿದಳು. ಆ ಒಂದು ಮಾತು; ಅವನ ಎದೆಯಲ್ಲಿ ಆನಂದದ ಹೊಂಬಿಸಲು ಪಸರಿಸುವಂತೆ ಮಾಡಿತು. 'ನನ್ನ ಬಾಲ.' ಆ ಒಂದು ಮಾತನ್ನು ಎಷ್ಟು ಸಲ ಕೇಳಿದರೂ ಅವನು ಬೇಸರ ಪಡುವಂತಿರಲಿಲ್ಲ.

ಅವನು ತನ್ನ ಕರವನ್ನು ಲಿಲ್ಲಿಯ ಹೆಗಲ ಮೇಲಿಟ್ಟ. ಅವಳ ಕಿವಿಯಲ್ಲಿ 'ನನ್ನ ಲಿಲ್ಲೀ-' ಎಂಬ ಮಾತನ್ನು ಉಸುರಿದ. ಆ ನುಡಿಯು ಅವಳ ಎದೆಯನ್ನು ಅರಳಿಸಿತು. 'ಲಿಲ್ಲೀ, ನೀನು ನನ್ನವಳು; ನಾನು ನಿನ್ನವನು!' ಬಾಲ ಅವಳ ಕಿವಿಯಲ್ಲಿ ಉಸುರಿದ. 'ನಾವು ಇಬ್ಬರೂ ಬೇರೆ ಬೇರೆಯಲ್ಲ. ಎರಡು ಒಂದಾಗ ಹೊರಟಿವೆ; ನಮ್ಮಿಬ್ಬರ ಬದುಕುಗಳು ಒಂದುಗೂಡಲಿ!'

ಲಿಲ್ಲಿಯು ಬಾಲನ ಮೋರೆಯನ್ನು ನೋಡಿದಳು; ಅವನ ತುಟಿಗಳ ಮೇಲೆ ಒಂದು ಮೃದುಹಾಸ ಮಿನುಗುತಿದ್ದುದನ್ನು ಕಂಡಳು. ಎರಡು ಮೋರೆಗಳು ಒಂದುಗೂಡಿದವು. ಬಾಲ ತನ್ನ ಪ್ರೀತಿಯ ಕಾಣಿಕೆಯನ್ನು ಕೊಟ್ಟ ಲಿಲ್ಲಿಗೆ; ಅದು ಅವಳ ಎದೆಯನ್ನು ಅರಳಿಸಿತು.

ಪೀಟರ್ ನಿದ್ದೆ ತಿಳಿದೆದ್ದ; ಬಾಲ ಲಿಲ್ಲಿಯಿಂದ ದೂರ ಸರಿದ.

ಕಾಮುಕ ಕಾಮುಕಿಯರು ತಮ್ಮ ಎದೆಯ ಭಾವಗಳನ್ನು ತಮ್ಮ ಮೊಗಗಳು ಹೊರಗೆಡವದಂತೆ ಜಾಗರೂಕರಾಗಿದ್ದರು. ಪೀಟರ್ ನಿದ್ದೆ ತಿಳಿದೆದ್ದಾಗ, ಲಿಲ್ಲಿಯ ಮುಖ, ಬಾಲನ ಕಣ್ಣುಗಳು ಏನೋ ಒಂದು ವಿಶೇಷ ಜರಗಿದೆಯೆಂಬುದನ್ನು ಪೀಟರಿಗೆ ಸೂಚಿಸಿದವು. ಆದರೆ ಅದೇನೆಂದು ಅವರನ್ನು ಪ್ರಶ್ನಿಸಲು ಪೀಟರ್ ಹೊರಡಲಿಲ್ಲ.

'ಲಿಲ್ಲೀ, ಸಮಯ ಬಹಳವಾಯಿತು, ಬಿಸಿಲು ಆರಿದೆ. ಇನ್ನು ಹೊರಡೋಣ.' ಪೀಟರ್ ತಂಗಿಗೆ ಹೇಳಿದ.

'ಹೊರಡೋಣವೇ ಬಾಲ?' ಲಿಲ್ಲಿ ಬಾಲನ ಮುಖವನ್ನು ನೋಡಿದಳು.

'ಹೂಂ.' ಎಂದು ಸಮ್ಮತಿಯನ್ನು ಸೂಚಿಸಿದ ಬಾಲ.

ಎಲ್ಲರೂ ಕುಳಿತಲ್ಲಿಂದ ಎದ್ದರು. ಅಡಿಗೆಯವನು ಸಾಮಾನುಗಳನ್ನು ಮೂಟೆ ಕಟ್ಟಿದ. ವಿನೋದ ಯಾತ್ರೆಯನ್ನು ಮುಗಿಸಿಕೊಂಡು ಅವರು ಊರ ಕಡೆಗೆ ಹೊರಟರು.

೩

ಎಂದಿನಂತೆ ಆ ದಿನವೂ ಬಾಲ ಪೀಟರಿನ ವಸತಿಯಲ್ಲಿ ಹಾಜರಾದ. ಪೀಟರ್ ಆಗ ತಾನೇ ಆಫೀಸಿನಿಂದ ಬಂದು ಚಹಾ ಕುಡಿಯುತ್ತಿದ್ದ. ಲಿಲ್ಲಿ ಅಲ್ಲಿರಲಿಲ್ಲ. ಪೀಟರ್ ನುಡಿದ.

'ಬಾ ಬಾಲ, ಕುಳಿತುಕೋ.'

ಪೀಟರಿನ ಪಕ್ಕದಲ್ಲಿದ್ದ ಒಂದು ಚೇರಿನ ಮೇಲೆ ಬಾಲ ಆಸೀನ ನಾದ. ನಡುಮನೆಯ ನಾಲ್ಕು ಭಾಗಗಳಿಗೂ ಅವನು ತನ್ನ ದೃಷ್ಟಿಯನ್ನು ಹೊರಳಿಸಿದ. ಲಿಲ್ಲಿ ಅಲ್ಲಿರದಿರುವುದನ್ನು ಕಂಡು ಬಾಲನಿಗೆ ಸ್ವಲ್ಪ ಬೇಸರ ವಾಯಿತು. ಬಾಲನ ಈ ಬೇಸರವು ಪೀಟರಿಗೆ ತಿಳಿಯದಿರಲಿಲ್ಲ. ಅದರ ಕಾರಣವೂ ಪೀಟರಿಗೆ ಗೊತ್ತು. ಅವನು ಅಡಿಗೆಯವನನ್ನು ಕೂಗಿ ಬಾಲ ನಿಗೆ ಒಂದು ಕಪ್ಪು ಚಹಾ ತಂದು ಕೊಡಲು ಹೇಳಿದ.

ಅಡಿಗೆಯವನು ಚಹಾವನ್ನು ತಂದು ಬಾಲನ ಮುಂದಿರಿಸಿದ. ಮೇಜದ ಮೇಲಿನಿಂದ ಕಪ್ಪನ್ನು ತೆಗೆದು ಬಾಲ ಚಹಾದ ರುಚಿಯನ್ನು ನೋಡಿದ. ಪೀಟರ್ ತನ್ನ ಚಹಾ ಕಪ್ಪನ್ನು ಬರಿದು ಮಾಡಿ ಮೇಜದ ಮೇಲೆ ಮಡಗಿದ; ತನ್ನ ದೃಷ್ಟಿಯನ್ನು ಬಾಲನ ಕಡೆಗೆ ಹೊರಳಿಸಿದ. ಈ ಮಾತುಗಳು ಅವನ ನಾಲಗೆಯಿಂದ ಹರಿದು ಬಂದವು. 'ಏನು ಬಾಲ, ನಿನಗೆ ಬೇಸರವಾದ ಹಾಗೆ ತೋರುತ್ತದೆ; ಲಿಲ್ಲಿಯನ್ನು ಕಾಣದುದರಿಂದಾ ಗಿರಬಹುದು. ಬೇಸರ ಪಡಬೇಡ; ಅವಳು ಈಗ ಬರುವಳು.'

ಕಪ್ಪನ್ನು ಬರಿದು ಮಾಡುತ್ತಾ ಬಾಲ ಹೇಳಿದ. 'ಅವಳೆಲ್ಲಿ ಹೋಗಿರುವಳು?'

'ದೂರ ಎಲ್ಲಿಯೂ ಹೋಗಿಲ್ಲ; ತನ್ನ ಗೆಳತಿಯರಲ್ಲಿಗೆ ಹೋಗಿ

ಬಹುದು. ನೋಡು ಬಾಲ ನಿನ್ನ ಸಂಗಡ ಒಂದು ವಿಷಯವನ್ನು ನಾನು ಪ್ರಸ್ತಾಪಿಸಬೇಕೆಂದಿರುವೆ. ನನ್ನ ಮಾತುಗಳಿಂದ ನಿನಗೆ ಸಿಟ್ಟು ಬರದೆಂದು ನಂಬುವೆ.'

'ಯಾವ ವಿಷಯವನ್ನು ಕುರಿತು ಬೇಕಾದರೂ ಮಾತಾಡು; ನಾನು ಸಿಟ್ಟಾಗುವುದೇಕೆ?' ಪೀಟರಿನ ಮುಖವನ್ನು ನೋಡುತ್ತಾ ಬಾಲ ಪ್ರಶ್ನಿಸಿದ.

'ಒಳ್ಳೆಯದು. ಲಿಲ್ಲಿಗೆ ಸಂಬಂಧಿಸಿದ ವಿಷಯವಾಗಿದೆ ಅದು.' ಪೀಟರ್ ಸಂಭಾಷಣೆಯನ್ನು ಪ್ರಾರಂಭಿಸಿದ.

'ಸರಿ.' ಬಾಲ ತಲೆಯಲ್ಲಾಡಿಸಿದ.

'ನೋಡು, ಅದು ನಿನಗೆ ಸಂಬಂಧಿಸಿದುದೂ ಆಗಿದೆ.'

'ಒಳ್ಳೆಯದು.'

'ಬಾಲ, ನೀನು ಒಂದು ಸಂಗತಿಯನ್ನು ನನ್ನಿಂದ ಮರೆಮಾಜಿರುವೆ; ಅದನ್ನು ನನ್ನಿಂದ ಅಡಗಿಸಿಟ್ಟಿರುವೆ.'

'ಏನದು ಪೀಟರ್?'

'ಈ ನಿನ್ನ ಗೆಳೆಯನಿಗೆ ಅದನ್ನು ನೀನು ಅರುಹಬೇಕಾಗಿತ್ತು.' ಪೀಟರ್ ಬಾಲನ ಕಣ್ಣುಗಳನ್ನು ನೋಡಿದ.

'ಯಾವುದನ್ನು?'

'ಆ ಕತೆಯನ್ನೆಲ್ಲಾ ನಾನು ಅರಿತಿರುವೆ ಬಾಲ; ನನಗೂ ಕಣ್ಣುಗಳಿವೆ; ಬುದ್ಧಿಯಿದೆ. ಮನುಷ್ಯನ ಮುಖದಲ್ಲಿ ಗೋಚರಿಸುವ ಭಾವ ಭೇದಗಳಿಂದ ಅವನ ಅಂತರಂಗವನ್ನು ನಾನು ತಿಳಿಯಬಲ್ಲೆ. ನಿನ್ನ ಈಗಿನ ಚರ್ಯೆಗಳಿಂದ ಒಂದು ವಿಷಯವು ನನಗೆ ಪ್ರತ್ಯಕ್ಷವಾಗಿದೆ. ನೋಡು, ಲಿಲ್ಲಿಯನ್ನು ಕಾಣದಿದ್ದರೆ ನಿನಗೆ ಸಂತಸವಿಲ್ಲ; ಅವಳನ್ನು ನೋಡುವಾಗ ನಿನ್ನ ಮೋರೆಯು ಅರಳುತ್ತದೆ. ಅವಳೊಡನೆ ಮಾತಾಡುವುದರಲ್ಲಿ, ಆಡುವುದರಲ್ಲಿ ನೀನು ಹೆಚ್ಚಿನ ಸಮಯವನ್ನು ಕಳೆಯುತ್ತಿರುವೆ. ಅವಳಿಲ್ಲದಿದ್ದರೆ ನಿನಗೆ ಬೇಸರ; ಉತ್ಸಾಹವಿಲ್ಲ. ಇವುಗಳೆಲ್ಲದರ ಅರ್ಥವೇನು?'

'ಅರ್ಥವೇನು?' ಪೀಟರಿನ ಮೋರೆಯನ್ನು ನೋಡಿದ ಬಾಲ ತನ್ನ ಮೊಗುವನ್ನು ತುಸು ಕೆಂಪು ಮಾಡಿಕೊಂಡು.

'ನೀನು ಲಿಲ್ಲಿಯನ್ನು ಪ್ರೀತಿಸುತ್ತಲಿರುವೆ; ಬಾಲ, ನಿನ್ನ ಈ ಅನು ರಾಗವನ್ನು ನಾನು ಬಲ್ಲೆ. ಇದನ್ನು ನೀನು ನನ್ನಿಂದ ಇಷ್ಟು ದಿನಗಳ ವರೆಗೆ ಮರೆಮಾಜಿದ್ದೆ.' ಸೌಮ್ಯ ಸ್ವರದಲ್ಲಿ ಪೀಟರ್ ಹೇಳಿದ.

'ಅಹುದು ಪೀಟರ್. ನಿಜ ನಿನ್ನ ಮಾತು; ನಾನು ಲಿಲ್ಲಿಯನ್ನು ಪ್ರೀತಿಸುತ್ತಿರುವೆ.' ಬಾಲ ನುಡಿದ. 'ನಿನ್ನ ತಂಗಿಯನ್ನು ನಾನು ಪ್ರೀತಿ ಸುತ್ತಿರುವೆ. ಅವಳಾದರೂ ನನ್ನನ್ನು ಪ್ರೀತಿಸುತ್ತಾಳೆ. ನಾನು ಅವಳನ್ನು ಪ್ರೀತಿಸ ಕೂಡದೇ?'

'ನಿಮ್ಮಿಬ್ಬರ ಪ್ರಣಯ ಕಲಾಪಗಳನ್ನು ನಾನು ತಿಳಿದಿರುವೆ. ಲಿಲ್ಲಿ ನಿನ್ನನ್ನು ಪ್ರೀತಿಸಕೂಡದೆಂದು ನಾನು ಹೇಳುವುದಿಲ್ಲ. ಅವಳ ಪ್ರೇಮ ವಿಶ್ವಾಸಗಳಿಗೆ ನೀನು ಯೋಗ್ಯನಿರುವೆಯೆಂಬುದನ್ನು ಬಲ್ಲೆ. ಆದರೆ ನೋಡು, ನಿನ್ನ ದಾರಿಯಲ್ಲಿ ಒಂದು ವೈಷಮ್ಯವಿದೆ; ಒಂದು ಪ್ರತಿಬಂಧ ವಿದೆ.'

'ನೀನು ಹೇಳುವುದನ್ನು ತಿಳಿದೆ. ಈ ಪ್ರಣಯವು ನಿನಗೆ ಸರಿ ದೋರುವುದಿಲ್ಲ. ಅಲ್ಲವೇ ಪೀಟರ್?'

'ಹಾಗಲ್ಲ ಬಾಲ, ನಾನು ಹೇಳಿದುದು. ಅಪಾರ್ಥವನ್ನು ಮಾಡಿ ಕೊಳ್ಳಬೇಡ.' ಸೌಮ್ಯಸ್ವರದಲ್ಲಿ ಪೀಟರ್ ನುಡಿದ. 'ಈ ನಿಮ್ಮ ಪ್ರಣಯ ನನಗೆ ಸರಿದೋರಲಿಲ್ಲವೆಂದು ನೀನು ಗ್ರಹಿಸಬಾರದು. ನನ್ನ ತಂಗಿಯು ನಿನ್ನನ್ನು ಮದುವೆಯಾಗಲು ಇಷ್ಟಪಡುತಿದ್ದರೆ ಅವಳನ್ನು ನಾನು ತಡೆಯುವದಿಲ್ಲ. ಆದರೆ ನೋಡು ಬಾಲ, ನಾವಿಬ್ಬರೂ ಒಂದು ಮತ ದವರಲ್ಲ. ನೀನು ಹಿಂದೂ ಬ್ರಾಹ್ಮಣ, ನಾವು ಕ್ರಿಶ್ಚನರು. ಓರ್ವ ಕ್ರಿಶ್ಚನ್ ಹುಡಿಗಿಯನ್ನು ನೀನು ಮದುವೆಯಾಗಲು ನಿನ್ನ ಹಿರಿಯರು ಒಪ್ಪುವರೇ? ನಿನ್ನ ತಾಯಿ, ಅಕ್ಕ ಮೊದಲಾದವರು ಸಮ್ಮತಿಸುವರೇ?'

'ಪೀಟರ್, ಅವರು ಒಪ್ಪದಿದ್ದರೇನಾಯಿತು? ನನ್ನ ಮುಂದಿನ

ಜೀವನವು ಹೇಗಿರಬೇಕೆಂದು ತೀರ್ಮಾನಿಸತಕ್ಕ ಕೆಲಸ ನನ್ನದು. ಲಿಲ್ಲಿ ಇಲ್ಲದಿದ್ದರೆ ನನ್ನ ಬದುಕನ್ನು ಇರುಳು ಕವಿಯುವುದು. ಲಿಲ್ಲಿಗಾಗಿ ನನ್ನ ಜಾತಿ ಮತಗಳನ್ನು ಪರಿತ್ಯಜಿಸಲು ನಾನು ಸಿದ್ಧನಾಗಿರುವೆ.' ದೃಢಸ್ವರದಲ್ಲಿ ಬಾಲ ಜವಾಬು ಹೇಳಿದ.

'ನೀನು ಬೇರೆೊಂದು ನೆನೆಯಬೇಡ; ನಿನ್ನ ಸ್ವಭಾವವು ನನಗೆ ಗೊತ್ತಿದೆ. ಈ ಪ್ರಣಯವು ಲಿಲ್ಲಿಯ ದುಃಖದಲ್ಲಿ ಕಲಾಶಿಸ ಬಹುದೆಂದು ವಿಚಾರಿಸಿ ಇಷ್ಟು ಹೇಳಿದೆ. ನಡುದಾರಿಯಲ್ಲಿ ನೀನು ಲಿಲ್ಲಿಯ ಕೈ ಬಿಡಕೂಡದು. ಅದನ್ನೆಚ್ಚರಿಸಲು ನಾನು ಇಷ್ಟು ನುಡಿದೆ.'

ಬಾಲ ತನ್ನ ಕೈ ಚಾಚಿ ಪೀಟರಿನ ಕರವನ್ನು ಹಿಡಿದುಕೊಂಡ. ಪೀಟರಿನ ಕಣ್ಣುಗಳನ್ನು ನೋಡುತ್ತಾ ಬಾಲ ನುಡಿದ ಬಾಲನ ಕಣ್ಣುಗಳಲ್ಲಿ ನೀರುತುಂಬಿದುದನ್ನು ಪೀಟರ್ ಕಾಣದಿರಲಿಲ್ಲ. 'ಪೀಟರ್, ನಮ್ಮ ಗೆಳೆತನವು ಪ್ರಾರಂಭಿಸಿ ಒಂದು ವರ್ಷಕ್ಕಿಂತ ಹೆಚ್ಚು ಕಾಲವಾಗಲಿಲ್ಲ. ಆದರೆ ನಿನಗಿಂತ ಮಿಗಲಾದ ಆಪ್ತರು ನನಗೆ ಒಬ್ಬೋಬ್ಬರಿಲ್ಲ. ಒಡಹುಟ್ಟಿದವರಿಗಿಂತಲೂ ಸಮೀಪದವನು ನೀನು. ನಿನ್ನಲ್ಲಿ ನಾನು ಲಿಲ್ಲಿಯನ್ನು ನಡುದಾರಿಯಲ್ಲಿ ಕೈಬಿಡುವೆನೆಂಬ ಸಂದೇಹ ಹುಟ್ಟಬೇಕೇ? ಪೀಟರ್, ನೀನು ನನ್ನ ಎದೆಯೊಳಗಿರುವುದೇನೆಂಬುದನ್ನು ತಿಳಿದಿದ್ದರೆ ಈ ಮಾತುಗಳನ್ನಾಡುತ್ತಿರಲಿಲ್ಲ.'

ತನ್ನ ಮಾತುಗಳು ಬಾಲನ ಮನಸ್ಸನ್ನು ತುಸ ನೋವು ಮಾಡಿದವೆಂಬುದನ್ನು ಪೀಟರ್ ತಿಳಿದ. ತನ್ನ ನುಡಿಗಳಿಂದ ಬಾಲ ನೊಂದುಕೊಂಡುದುದನ್ನು ಕಾಣುವಾಗ ಪೀಟರಿಗೆ ತುಂಬ ಸಂಕಟವಾಯಿತು. ಅವನು ಬಾಲನ ಹೆಗಲ ಮೇಲೆ ಕೈಹಾಕಿಕೊಂಡು ಹೇಳಿದ. 'ಇಲ್ಲ ಬಾಲ! ನಾನು ಹಾಗೆ ವಿಚಾರಿಸಲಿಲ್ಲ—ನೋಡು ಲಿಲ್ಲಿ ನನ್ನ ತಂಗಿ; ಅವಳ ಭವಿಷ್ಯಜ್ಜೀವನವನ್ನು ಕುರಿತು ನಾನು ಆಲೋಚಿಸಬೇಕಾದುದು ಅತ್ಯಾವಶ್ಯಕವಲ್ಲವೇ? ನನ್ನ ತಂಗಿಯನ್ನು ನೀನು ಪ್ರೀತಿಸಿ ಅವಳನ್ನು ಮದುವೆಯಾಗ ಹೊರಟಿರುವುದಕ್ಕೆ ನಾನು ಸಂತೋಷ ಪಡುತ್ತೇನೆ. ಅದು ನಮ್ಮ ಗೆಳೆತನವನ್ನು ದೃಢಪಡಿಸ ಬಹುದು. ನಿನ್ನ ಪ್ರೇಮವು ನಿಷ್ಕಲಂಕವೆಂಬುದರ ಬಗ್ಗೆ

ನನಗೆ ಸಂಶಯವಿಲ್ಲ. ಆದರೆ ನೋಡು, ಮತಾಚಾರಗಳನ್ನು ತುಳಿದು ಮುಂಬರಲು ನಿನಗೆ ಧೈರ್ಯವಿದೆಯೋ ಎಂಬ ಸಂದೇಹವು ನನಗಿದ್ದಿತು. ಈಗ ನನ್ನ ಮಾತುಗಳಿಂದ ಅದು ತೊಲಗಿತು.'

'ಲಿಲ್ಲಿಗಾಗಿ ನನ್ನ ಜಾತಿ ಮತಗಳ ಮೇರೆಯನ್ನು ಮಿರಾರುವೆ. ಪೀಟರ್, ನನ್ನ ನುಡಿಯನ್ನು ನಂಬು.' ಬಾಲ ಹೇಳಿದ.

'ಆಗೋ, ಲಿಲ್ಲಿ ಬರುತ್ತಿರುವಳು.' ಪೀಟರ್ ನುಡಿದ.

ಅವರಿಬ್ಬರೂ ತಮ್ಮ ಸಂಭಾಷಣೆಯನ್ನು ನಿಲ್ಲಿಸಿದರು. ಲಿಲ್ಲಿ ಕೈಯಲ್ಲಿ ಒಂದು ಕೊಡೆ ಹಿಡಿದುಕೊಂಡು ನಗುತ್ತಾ ಒಳಗೆ ಪ್ರವೇಶಿಸಿದಳು. ನಡುಮನೆಯಲ್ಲಿ ಬಾಲನಿರುವುದು ಅವಳಿಗೆ ಗೋಚರಿಸಿತು. ಅವಳು ಅವನನ್ನು ಪ್ರಶ್ನಿಸಿದಳು. 'ಏನು ಬಾಲ, ನೀನು ಬಂದು ಬಹಳ ಹೊತ್ತಾಯಿತೇ? ನಾನು ಗೆಳತಿ ಗ್ರೇಸಿಯ ಮನೆಗೆ ಹೋಗಿದ್ದೆ.'

'ಈಗ ತಾನೇ ನಾನು ಬಂದೆ.' ಬಾಲ ಜವಾಬು ಹೇಳಿದ.

ಗೆಳೆಯರಿಬ್ಬರ ಸಂಭಾಷಣೆಯಲ್ಲಿ ಅವಳೂ ಸೇರಿದಳು. ಅವರ ಮಾತುಗಳಲ್ಲಿ ತನ್ನ ಮಧುರ ಸ್ವರವನ್ನು ಸೇರಿಸಿದಳು.

ಟೇಬಲ್ ಟೆನ್ನಿಸ್ ಆಡುವದರಲ್ಲಿ ಅವರು ಹೊತ್ತನ್ನು ಕಳೆದರು. ಬಾಲ ಮತ್ತೂ ಪೀಟರ್ ಇಬ್ಬರೂ ಆಡುವುದನ್ನು ನೋಡುತ್ತಾ ನಿಂತಳು ಲಿಲ್ಲಿ.

ಸಂಜೆಯಾಗಲು ಬಾಲ ತನ್ನ ವಸತಿಗೆ ಹೊರಟ. ತೋಟದ ಬಾಗಿಲವರೆಗೆ ಲಿಲ್ಲಿ ಅವನನ್ನು ಹಿಂಬಾಲಿಸಿದಳು. ಬಾಲ ಲಿಲ್ಲಿಯ ಕಡೆಗೆ ತನ್ನ ಕಣ್ಣುಗಳನ್ನು ಚಲಿಸಿದಮೇಲೆ ಹೇಳಿದ 'ನಾನು ಹೋಗಲೇ ಲಿಲ್ಲೀ?'

"ಹೂಂ ನಾಳೆ ಬರಲು ಮರೆಯದಿರು."

"ನನ್ನ ಬಾಳಿನ ಬೆಳಕು ಇಲ್ಲಿರುವಾಗ ಇಲ್ಲಿಗೆ ಬರದಿರಲು ಹೇಗೆ ಸಾಧ್ಯ?"

"ಲಿಲ್ಲಿಯ ತುಟಿಗಳ ಮೇಲೆ ಒಂದು ಮಂದಸ್ಮಿತ.

"ಒಳ್ಳೆಯದು ಲಿಲ್ಲೀ, ನಾಳೆ ಕಾಣುವಾ." ಲಿಲ್ಲಿಯ ಮೃದು

ಕರವನ್ನು ಪರಿಗ್ರಹಿಸಿ ಅದರ ಮೇಲೆ ಬಾಲ ಒಂದು ಚುಂಬನ ಮುದ್ರೆಯನ್ನು ಒತ್ತಿದ. “ ನಾಳೆ ಬರುವೆ ”

ಬಾಲ ಹೊರಗಿನ ದಾರಿಯನ್ನು ಸೇರಿದ; ಅವನು ಕಣ್ಮರೆಯಾಗುವನಕ ಲಿಲ್ಲಿ ಅವನನ್ನೇ ನೋಡಿದಳು.

* * * *

ಬಾಲ ಮನೆಗೆ ತಲುಪಿದ. ತನ್ನ ಕೋಣೆಗೆ ಹೋಗಿ ಕೋಟನ್ನು ಬಿಚ್ಚಿ ಹಾಕಿ ಒಂದು ಚೇರಿನ ಮೇಲೆ ಕುಳಿತುಕೊಂಡ. ಮೇಜದ ಮೇಲೆ ಉರಿಯುತ್ತಿದ್ದ ದೀಪವನ್ನು ನೋಡುತ್ತಾ ಸ್ವಲ್ಪ ಹೊತ್ತು ಕುಳಿತ. ಆ ಮೇಲೆ ಮೇಜದ ಮೇಲಿದ್ದ ‘ಗರಿ’ಯನ್ನು ತೆಗೆದುಕೊಂಡ. ತನ್ನ ವಿರಾಮ ವೇಳೆಯನ್ನು ವ್ಯಯಗೊಳಿಸಲು ‘ಗರಿ’ಗಿಂತ ಉತ್ತಮವಾದುದು ಅವನಿಗೆ ಬೇರೊಂದಿರಲಿಲ್ಲ. ಅದರಿಂದ ಒಂದೆರಡು ಕವನಗಳನ್ನು ಓದಿದ.

ಹೊರಗೊಂದು ಶಬ್ದ; ಕಾಲು ಹೆಜ್ಜೆಗಳ ಸಪ್ಪಳ. ಯಾರೋ ಅವನ ಕೋಣೆಯ ಕಡೆಗೆ ಬರುತ್ತಿದ್ದಂತೆ ತೋರಿತು. ಬಾಲ ಪುಸ್ತಕದಿಂದ ತಲೆಯೆತ್ತಿದ. ಅಪ್ಪ ಬರುತ್ತಿದ್ದುದು ಬಾಲನಿಗೆ ಗೋಚರಿಸಿತು. ತಾಯಿಯ ಮೋರೆಯನ್ನು ಅವನು ನೋಡಿದ. ಅವಳ ಕಣ್ಣುಗಳು ಕೆಂಪಾಗಿದ್ದುವು. ಮೋರೆಯು ಬಾಡಿದ್ದಿತು. ಏನೋ ಒಂದು ಬಿರುಗಾಳಿ ಬರುತ್ತಿದೆಯೆಂದು ಬಾಲ ಊಹಿಸಿದ.

“ ಬಾಲ! ” ಅಪ್ಪನ ಕೊರಳಿಂದ ಒಂದು ಶೋಕಪೂರ್ಣ ಸ್ವರವು ಹೊರಟಿತು.

“ ಏನಪ್ಪಾ? ” ಬಾಲ ಪ್ರಶ್ನಿಸಿದ.

“ ನೋಡು ಬಾಲ, ಈಗೀಗ ನಿನ್ನ ಕೆಲಸಗಳು ಅತ್ಯಂತ ವಿಚಿತ್ರವಾಗಿ ತೋರುತ್ತಲಿವೆ. ನಿನ್ನ ಸ್ವಭಾವವು ಬದಲಾಯಿಸಿದೆ. ನಮ್ಮ ಮನೆತನಕ್ಕೆ ಕೆಟ್ಟ ಹೆಸರು ತರಲು ನೀನು ಹೊರಟಹಾಗಿದೆ. ’

‘ ನೀನು ಹೇಳುತ್ತಿರುವುದು ನನಗೆ ತಿಳಿಯುವುದಿಲ್ಲವಪ್ಪಾ! ’ ಯಾವುದನ್ನೂ ತಿಳಿಯದವನಂತೆ ಬಾಲ ಹೇಳಿದ.

'ಬಾಲ ನಿನ್ನ ತಾಯಿ ನೀನು ಮಾಡುತ್ತಿರುವ ಹೀನಕೆಲಸಗಳನ್ನು ತಿಳಿದಿರುವಳು. ಏಕೆ ಬಾಲ ನನ್ನ ಬಾಯಿ–ಹಾರಿಸುವುದು? ಈಗ ನೀನು ಆಫಿಸಿನಿಂದ ಬಂದರೆ ಮನೆಯಲ್ಲಿರುವುದಿಲ್ಲ. ಯಾವಾಗಲೂ ಹೊರಗೆ ಅಡ್ಡಾಡುತ್ತಿರುವೆ.'

'ಏನವ್ವಾ, ನಾನು ಆಫೀಸಿನಿಂದ ಬಂದರೆ ಹೊರಗೆಲ್ಲಿಯೂ ಅಡ್ಡಾಡ ಹೋಗದೆ ಹೆಣ್ಣುಮಕ್ಕಳಂತೆ ಮನೆಯಲ್ಲಿಯೇ ಇರಬೇಕೇ? ಹೊರಗೆ ನನ್ನ ಸ್ನೇಹಿತರಿದ್ದಾರೆ; ಗೆಳೆಯರಿದ್ದಾರೆ, ಅವರಲ್ಲಿಗೆ ಹೋಗುವ ದನ್ನು ಬಿಡಬೇಕೇನವ್ವಾ?'

'ಸ್ನೇಹಿತರಮನೆಗೋ,–ಅವರೊಡನೆ ತಿರುಗಾಡಲೋ ನೀನು ಹೋಗುವುದಾಗಿದ್ದರೆ, ಮಾತಾಡಲು ನಾನು ಬರುತ್ತಲೇ ಇರಲಿಲ್ಲ.'

'ಹಾಗದರೆ ಈ ಸಂಗತಿ ಯಾವುದು? ಅದನ್ನು ಒಂದಿಷ್ಟು ಹೇಳ ಬಾರದೇ?' ಏನನ್ನೂ ಅರಿಯದವನಂತೆ ಬಾಲ ತಾಯಿಯನ್ನು ಪ್ರಶ್ನಿಸಿದ.

'ನಿನ್ನ ಹೀನ ಕೆಲಸಗಳನ್ನು ನಾನು ತಿಳಿದಿದ್ದೇನೆ ಬಾಲ.,

'ನಾನು ಯಾವ ಹೀನ ಕೆಲಸವನ್ನೂ ಮಾಡಿಲ್ಲ.'

'ಬೇರೊಂದು ಜಾತಿಯ ಹೆಣ್ಣಿನೊಡನೆ ಊರೂರು ಅಲೆಯು ವುದು; ಅವಳ ಸಂಗಡ ನಾಟಕ ಸಿನೆಮಾಗಳಿಗೆ ಹೋಗುವುದು; ಕುಲಾ ಚಾರಗಳ ಪರಿವೆಯಿಲ್ಲದೆ ಅವಳ ಮನೆಯಲ್ಲಿ ಸಿಕ್ಕಿದುದನ್ನಾಲ್ಲಾ ಮುಕ್ಕು ವುದು; ಇವುಗಳೆಲ್ಲಾ ಪುಣ್ಯದ ಕೆಲಸಗಳೇನು?'

'ನಾನು ಯಾವ ಹೆಣ್ಣಿನ ಸಂಗಡವೂ ಅಲೆಯುತ್ತಲಿಲ್ಲ. ಯಾರೋ ಹೇಳಿದ ಮಾತನ್ನು ಕೇಳಿ ಹೀಗೆ ಗೋಳಾಡ ಬೇಡವ್ವಾ!'

'ನಾನು ಯಾರ ಮಾತನ್ನೂ ಕೇಳಿರುವುದಿಲ್ಲ; ನಾನೇ ಈ ಕಣ್ಣು ಗಳಿಂದ ನೀನು ಆ ಹೆಣ್ಣಿನ ಸಂಗಡ ಅಲೆಯುತ್ತಿದ್ದುದನ್ನು ನೋಡಿದೆ.'

'ನಾನು ಅಲೆದರಲ್ಲವೇ ನೀನು ಕಾಣುವುದು!'

'ಬಾಲ, ಈ ಬಾಯಿ–ಹಾರಿಸುವ ಕೆಲಸವೇಕೆ? ಮೊನ್ನೆ ದಿನ ನೀನು ಹೋದುದೆಲ್ಲಿಗೆಂಬುದು ನನಗೆ ಗೊತ್ತಿದೆ. ಆ ದಿನ ನಿನ್ನ ಸಂಗಡ

ಸಿನೇಮಾಕ್ಕೆ ಬಂದ ಹೆಣ್ಣು ಯಾರೆಂಬುದನ್ನು ಬಲ್ಲೆ. ಅಷ್ಟು ಜನರಿರುವ ಹಾಲಿನಲ್ಲಿ ಯಾವ ಪರಿವೆಯೂ ಇಲ್ಲದೆ. ಹಿಂದಣ ಸೋಫದಲ್ಲಿ ಕುಳಿತು ಅವಳ ಬೆನ್ನ ಮೇಲೆ ಕೈ ಆಡಿಸುತಿದ್ದಿಯಲ್ಲಾ ನೀನು! ಥೂ, ನಾಚಿಕೆ! ಗ್ಯಾಲರಿಯಲ್ಲಿ ಕುಳಿತಿದ್ದ ನಾನೂ ಗಂಗೆಯೂ ನೀನು ಅವಳ ಸಂಗಡ ಮಾತಾಡುವುದನ್ನೂ, ಅವಳ ಬೆನ್ನ ಮೇಲೆ ಕೈ ಆಡಿಸುವುದನ್ನೂ ನೋಡಿದೆವು.'

'ನಾನೇ!' ವಿಸ್ಮಯ ಹೊಂದಿದವನಂತೆ ಪ್ರಶ್ನಿಸಿದ ಬಾಲ.

'ಅಹುದು ನೀನೇ.' ಎಂದಳು ತಾಯಿ. 'ಬಾಲ ನಿನಗೇಕೆ ಈ ಹುಚ್ಚು ಹಿಡಿದಿತು? ಚೆಲುವು ಹುಡುಗಿಯರಿದ್ದಾರೆ. ಆದರೆ ನೀನು ಅವರನ್ನು ಕಣ್ಣೆತ್ತಿ ನೋಡುವುದಿಲ್ಲ. ಈಗ ಈ ಕ್ರಿಶ್ಚನ್ ಹುಡುಗಿಯ ಬೆನ್ನ ಹಿಂದೆ ಓಡುತ್ತಿರುವೆ. ಇದು ನಿನಗೆ ತಕ್ಕದಲ್ಲ. ಈ ಸಂಗತಿಯು ಊರ ಜನರಿಗೆ ಹರಟೆ ಕೊಚ್ಚಲು ಒಂದು ವಸ್ತುವಾಗಿ ಹೋಗಿದೆ. ಅವರ ನಿಂದೆಯ ಮಾತುಗಳನ್ನು ನಾನು ಕೇಳಿ ಸಹಿಸಬೇಕು. ಬಾಲ, ನೋಡು ನಿನಗೆ ಬುದ್ಧಿಯಿದೆ. ಈ ನಾಚಿಕೆಯ ಕೆಲಸದಿಂದ ತಾಯಿಯ ಕರಳನ್ನು ಮರುಗುವಂತೆ ಮಾಡದಿರು.'

ಕಣ್ಣುಗಳಲ್ಲಿ ನೀರು ತಂದುಕೊಂಡು ಅವ್ವ ಹೇಳಿದಳು. ತಾನು ಲಿಲ್ಲಿಯನ್ನು ಪ್ರೀತಿಸುತ್ತಿರುವುದು ಅವ್ವನಿಗೆ ತಿಳಿದು ಹೋಗಿದೆಯೆಂಬುದು ಬಾಲನಿಗೆ ಹೊಳೆದಿತು. ಲಿಲ್ಲಿಯನ್ನು ಪ್ರೀತಿಸುವುದು ಒಂದು ತಪ್ಪಾಗಿ, ಒಂದು ನಾಚಿಕೆಯ ಕೆಲಸವಾಗಿ ಬಾಲನ ದೃಷ್ಟಿಗೆ ಗೋಚರಿಸಲಿಲ್ಲ. ತನ್ನ ಸಮುದಾಯದ ಹೆಣ್ಣುಗಳಲ್ಲಿಲ್ಲದ ಒಂದು ವೈಶಿಷ್ಟ್ಯವನ್ನು ಬಾಲ ಲಿಲ್ಲಿಯಲ್ಲಿ ಕಂಡಿದ್ದ. ತನ್ನ ಜೀವನದಲ್ಲಿ ಬೆಳಕನ್ನು ತುಂಬಲು ಲಿಲ್ಲಿಗೆ ಮಾತ್ರ ಶಕ್ಯವೆಂದು ಬಾಲ ತಿಳಿದಿದ್ದ. ಆದರೆ ಸಮುದಾಯದ ರೂಢಿಗಳ ಕಟ್ಟಿನಲ್ಲಿ ಸಿಲುಕಿದ ಅವ್ವನಿಗೆ ತನ್ನ ಎದೆಯಲ್ಲಿದ್ದುದನ್ನು ಹೇಗೆ ಅರುಹಬೇಕೆಂಬುದು ಬಾಲನಿಗೆ ತಿಳಿಯಲಿಲ್ಲ.

ಬಾಲ ತಾಯಿಯನ್ನು ಪ್ರೀತಿಸುತಿದ್ದ. ಅವಳಲ್ಲಿ ಅವನಿಗೆ ಅಪಾರ ಗೌರವವಿದ್ದಿತು. ತಾಯ ಮನಸ್ಸನ್ನು ನೋವು ಮಾಡಲು ಅವನು

ಒಪ್ಪುತ್ತಿರಲಿಲ್ಲ. ಈ ಸಂದರ್ಭದಲ್ಲಿ ತಾಯಿಗೆ ಏನು ಹೇಳಬೇಕೆಂಬುದು ಬಾಲನಿಗೆ ತಿಳಿಯದಾಯಿತು. ಲಿಲ್ಲಿ ಅವನ ಉಸುರಿನಂತಿದ್ದಳು. ಅವಳನ್ನು ಮರೆಯುವುದು ಅಶಕ್ಯ. ಅವನು ಮೌನವನ್ನು ಅವಲಂಬಿಸಿದ; ತಾಯಿಯ ನುಡಿಗಳಿಗೆ ಜವಾಬು ಹೇಳಲಿಲ್ಲ.

‘ನೋಡು ಬಾಲ, ನೀನು ಮಾತಾಡದಿರುವುದೇ ನಾನು ಹೇಳಿದುದು ನಿಜವೆಂಬುದನ್ನು ಸೂಚಿಸುತ್ತದೆ.’ ಮಗನು ಜವಾಬು ಹೇಳದಿರುವುದನ್ನು ಕಂಡು ತಾಯಿ ಅಂದಳು. ‘ಬಾಲ, ಬಿಟ್ಟುಬಿಡು ಆ ಮಾಟಗಾತಿಯ ಸಹವಾಸವನ್ನು. ಅದು ಒಳ್ಳೆಯದಲ್ಲ. ನಿನ್ನ ಕೆಲಸದಿಂದ ನಮ್ಮ ಮನೆತನಕ್ಕೆ ಅಪಾರವಾದ ಮಾನ ಹಾನಿಯಾಗುತ್ತದೆ. ನಿನ್ನ ಹೆತ್ತ ತಾಯಿ, ಒಡಹುಟ್ಟಿದ ಅಕ್ಕ, ಇವರನ್ನು ಕೊರಗಿಸಬೇಡ.’

ಬಾಲ ಮೇಜದ ಮೇಲೆ ಉರಿಯುತ್ತಿದ್ದ ದೀಪವನ್ನು ನೋಡಿದ. ಅನೇಕ ವಿಚಾರಗಳು ಅವನ ಮೆದುಳಿನಲ್ಲಿ ಮೂಡಿದವು. ಲಿಲ್ಲಿಯನ್ನು ತಾನು ಪ್ರೀತಿಸುವುದರಲ್ಲಿ ತಪ್ಪೇನೆಂದು ತಾಯಿಯನ್ನು ಪ್ರಶ್ನಿಸಬೇಕೆಂದು ಅವನು ಒಮ್ಮೆ ಆಲೋಚಿಸದಿರಲಿಲ್ಲ. ಆದರೆ ಮನಸ್ಸಿನಲ್ಲಿ ಉದಿಸಿದ ವಿಚಾರವು ಹೊರಗೆ ಬರಲಿಲ್ಲ. ಹಾಗೆ ನುಡಿಯುವುದರಿಂದ ತಾಯಿಯ ಎದೆಯು ಇನ್ನಷ್ಟು ನೋಯುವುದೆಂದು ಅವನು ತಿಳಿದ. ಆದುದರಿಂದ ಆ ವಿಚಾರವನ್ನು ತನ್ನ ಮನಸಿನಸ್ಸಿನಲ್ಲಿಯೇ ಅಡಗಿಸಿಕೊಂಡು ‘ಗರಿ’ಯ ಹಾಳೆಗಳನ್ನು ಮಗುಚಿ ಹಾಕತೊಡಗಿದ.

## ೪

ಲಿಲ್ಲಿಗೆ ಆ ದಿನ ಆರೋಗ್ಯವಿರಲಿಲ್ಲ. ಅವಳ ಚೆಲುವು ಮೋರೆಯ ಮೇಲೆ ಯಾವುದೋ ಒಂದು ಚಿಂತೆಯ ಮುಗಿಲು ತೇಲುತಿದ್ದಿತು. ಯಾವ ಕೆಲಸದಲ್ಲಿಯೂ ಅವಳಿಗೆ ಉತ್ಸಾಹವಿರಲಿಲ್ಲ. ಆ ಹಗಲನ್ನು ಅವಳು ತನ್ನ ಕೋಣೆಯಲ್ಲಿಯೇ ಕಳೆದಳು.

ಪೀಟರ್ ಒಂದೆರಡು ಸಲ ತಂಗಿಯನ್ನು ಪ್ರಶ್ನಿಸದಿರಲಿಲ್ಲ. ತಲೆನೋವು ಎಂದು ಹೇಳಿದಳು ಲಿಲ್ಲಿ. ಲಿಲ್ಲಿಯ ಅಸ್ವಾಸ್ಥ್ಯಕ್ಕೆ ತಲೆನೋವೇ ಕಾರಣ ವಿರಬಹುದೆಂದು ಪೀಟರ್ ವಿಚಾರಿಸಿದ. ಅದಲ್ಲದೆ ಬೇರೆಕಾರಣಗಳಿರಬೇಕೆಂದು ಅವನು ಬಗೆಯಲಿಲ್ಲ.

ಎಂದಿನಂತೆ ಆ ದಿನವೂ ಚಾಲ ಬಂದ. ನಡುಮನೆಯಲ್ಲಿ ಲಿಲ್ಲಿಯ ನಗುಮೊಗವು ಅವನಿಗೆ ಗೋಚರಿಸಲಿಲ್ಲ. ಲಿಲ್ಲಿಯ ತುಟಿಗಳ ಮೇಲೆ ಮಿನುಗುತಿದ್ದ ಎಳೆನಗೆಯು ಅವನಿಗೆ ಸುಸ್ವಾಗತವನ್ನು ನೀಡಲಿಲ್ಲ. ಅವಳ ಹೊಳೆವ ಕಣ್ಣುಗಳು ಗೋಚರಿಸದಿದ್ದುದನ್ನು ಕಂಡು ಚಾಲನಿಗೆ ಬೇಸರವಾಯಿತು. ಅವಳು ಹೊರಗೆ ಹೋಗಿರಬೇಕೆಂದು ಅವನು ವಿಚಾರಿಸಿದ.

ಪೀಟರಿನ ಸಂಗಡ ಒಂದೆರಡು ಮಾತುಗಳನ್ನಾಡಿದುದಾಯಿತು. ಮೇಜದ ಮೇಲೆ ಬಿದ್ದಿದ್ದ 'ಹಿಂದೂ' ವಿನ ಹಾಳೆಗಳನ್ನು ಮಗುಚಿ ಹಾಕಿದುದೂ ಆಯಿತು. ಇಷ್ಟೆಲ್ಲ ಆದ ಮೇಲೆ ಚಾಲ ಪೀಟರನ್ನು ಪ್ರಶ್ನಿಸಿದ. 'ಲಿಲ್ಲಿ ಎಲ್ಲಿ ಹೋಗಿದ್ದಾಳೆ?'

'ಏನು ಚಾಲ, ಲಿಲ್ಲಿಯನ್ನು ಕಾಣದಿದ್ದರೆ ನಿನಗೆ ಮನಸ್ಸು ಸಮಾಧಾನ ವಾಗುವುದಿಲ್ಲವೋ? ಅವಳು ಎಲ್ಲಿಯೂ ಹೋಗಿಲ್ಲ. ತನ್ನ ಕೋಣೆಯಲ್ಲಿಯೇ ಇದ್ದಾಳೆ. ಅವಳ ಮೈ ಚೆನ್ನಾಗಿಲ್ಲವೆಂದು ತೋರುತ್ತದೆ.'

'ಏನಾಗಿದೆ ಅವಳಿಗೆ?'

'ಏನೋ ಒಂದು ಸ್ವಲ್ಪ ತಲೆನೋವೆಂದು ಹೇಳಿದಳು. ತನ್ನ ಕೋಣೆಯಲ್ಲಿದ್ದಾಳೆ. ಹೋಗಿ ಮಾತಾಡು.' ಪೀಟರ್ ನುಡಿದ.

ಬಾಲನಿಗೆ ಅಷ್ಟೇಬೇಕಾದುದು; ಪೀಟರ್ ಮಾತು ಮುಗಿಸಿದೊಡನೆಯೇ ಅವನು ಲಿಲ್ಲಿಯ ಕೋಣೆಗೆ ಆಗಮಿಸಿದ. ಲಿಲ್ಲಿಯನ್ನು ಕಾಣಲು ಬಾಲನಿಗಿದ್ದ ಆತುರವನ್ನು ನೋಡಿ ಪೀಟರಿಗೆ ನಗು ಬಂದಿತು. ಪೀಟರಿನ ಮೋರೆಯಲ್ಲಿ ನಗುಮೂಡಿದುದನ್ನು ಬಾಲ ಕಾಣದಿರಲಿಲ್ಲ.

ಲಿಲ್ಲಿಯ ಕೋಣೆಯ ಬಳಿಗೆ ಬಾಲ ಬಂದ. ಕದಗಳು ಮುಚ್ಚಲ್ಪಟ್ಟಿದ್ದವು. ಒಳಗೆ ಅಗಣಿ ಹಾಕಿದ್ದಳು. ಬಾಲ ಕದಗಳನ್ನು ತಟ್ಟತೊಡಗಿದ. 'ಯಾರದು?' ಲಿಲ್ಲಿಯ ಕಂಠಸ್ವರವು ಹೊರಕ್ಕೆ ಹರಿದುಬಂದಿತು.

'ನಾನು ಲಿಲ್ಲೀ.' ಎಂದ ಬಾಲ.

'ಯಾರು ಬಾಲನೇ?'

'ಹೂಂ.'

ಲಿಲ್ಲಿ ಮುಚ್ಚಿದ್ದ ಕದಗಳನ್ನು ಬಿಚ್ಚಿದಳು. ಲಿಲ್ಲಿಯ ಬಾಡಿದ ಮೋರೆಯು ಬಾಲನಿಗೆ ಗೋಚರಿಸಿತು. 'ಒಳಗೆ ಬಾ.' ಎಂದಳು ಲಿಲ್ಲಿ.

ಬಾಲ ಕೋಣೆಯೊಳಗೆ ಪ್ರವೇಶಿಸಿದ. ಅಲ್ಲಿದ್ದ ಒಂದು ಚೇರಿನ ಮೇಲೆ ಆಸೀನನಾದ. ಲಿಲ್ಲಿ ತನ್ನ ಹಾಸಿಗೆಯ ಮೇಲೆ ಕುಳಿತುಕೊಂಡಳು. ಸದಾ ಅವಳ ತುಟಿಗಳ ಮೇಲೆ ಕುಣಿಯುತಿದ್ದ ಮಂದಸ್ಮಿತವು ಮಾಯವಾಗಿದ್ದಿತು. ಉನ್ಮೇಷವು ಅವಳ ಮೋರೆಯಲ್ಲಿ ಗೋಚರಿಸಲಿಲ್ಲ. ಅವಳ ಕಣ್ಣುಗಳು ಕೆಂಪಾಗಿದ್ದವು.

'ಏನು ಲಿಲ್ಲೀ, ಬಹಳ ನೊರಗಿರುವೆ?' ಬಾಲ ಮಾತುಗಳಾಡಲು ಪ್ರಾರಂಭಿಸಿದ.

'ಆರೋಗ್ಯವಿಲ್ಲ; ತಲೆನೋವು.'

'ಅಯ್ಯೋ!' ಲಿಲ್ಲಿಯ ಹಣೆಯನ್ನು ಮುಟ್ಟಿ ನೋಡಿದ ಬಾಲ. ಅದು ಸುಡುತಿದ್ದಿತು. 'ಪಾಪ, ತಲೆನೋವು ವಿಪರೀತವಾಗಿದೆಯೆಂದು

ತೋರುತ್ತದೆ. ಏಸ್ಪರಿನ್ ಏನಾದರೂ ತಕೋಬಾರದಿತ್ತೇ? ಅದೇಕೆ ಕಣ್ಣುಗಳಲ್ಲಿ ನೀರು! ನೀನು ಅಳುವ ಹಾಗಿದೆ!'

'ಬಾಲ, ನಾನು ಅಳುವುದೇಕೆ? ಏನೋ ತಲೆಸಿಡಿತದಿಂದ ಕಣ್ಣು ಗಳಲ್ಲಿ ನೀರು ತುಂಬಿರಬಹುದು.' ಕಿರುನಗೆಯೊಡನೆ ಲಿಲ್ಲಿ ನುಡಿದಳು.

ಲಿಲ್ಲಿಯ ಕೈ ಹಿಡಿದುಕೊಂಡು ಬಾಲ ಹೇಳಿದ. 'ನೋಡು ಲಿಲ್ಲೀ, ನಾನು ನಿನ್ನನ್ನು ಪ್ರೀತಿಸುತ್ತಿರುವುದು ಅವ್ವನಿಗೆ ತಿಳಿದಿತು.'

'ಅವರೇನೆಂದರು?'

'ಏನು ಹೇಳುವುದು? ಅದು ಅವರಿಗೆ ತುಂಬಾ ನೋವು ಮಾಡಿದೆ. ಅದಕ್ಕಾಗಿ ನೀನು ಹೆದರಬೇಡ. ನೀನಲ್ಲದೆ ಬೇರೆ ಯಾರೂ ನನ್ನ ಎದೆ ಯಲ್ಲಿ ಬೆಳಕನ್ನು ತುಂಬರು. ನೀನಲ್ಲದೆ ಬೇರೆ ಯಾರೂ ನನ್ನ ಜೀವನದ ಸಹಪಥಿಕಳಾಗರು. ಬಾಲನಿಗಾಗಿ ಲಿಲ್ಲೀ ತಿಳಿಯಿತೇ? ನೋಡು, ಜಾತಿ ಮತಗಳನ್ನು ಬಿಡಲು ನಾನು ತಯಾರು.'

'ಅದರಿಂದ ನಿನ್ನ ತಾಯಿಗೆ ಬಹು ನೋವಾಗದೆ?'

'ಏನು ಮಾಡುವುದು? ಒಂದುವೇಳೆ ಅದು ಅವರ ಬದುಕನ್ನು ಇರುಳು ಕವಿಯುವಂತೆ ಮಾಡಬಹುದು. ಆದರೆ ನೋಡು, ನೀನಿಲ್ಲದೆ ನಾನು ಬದುಕುವಂತಿಲ್ಲ.'

'ಬಾಲ, ನೀನು ನಿಜವಾಗಿಯೂ ನನ್ನನ್ನು ಪ್ರೀತಿಸುತ್ತಿರುವೆಯಾ?' ಬಾಲನ ಕಣ್ಣುಗಳನ್ನು ನೋಡುತ್ತಾ ಲಿಲ್ಲಿ ಪ್ರಶ್ನಿಸಿದಳು.

'ಅದರಲ್ಲಿ ನಿನಗೆ ಸಂಶಯವೆ?' ಬಾಲ ನುಡಿದ. 'ಲಿಲ್ಲೀ, ನೀನಲ್ಲದೆ ಇನ್ನಾರು ನನ್ನ ಎದೆಯಲ್ಲಿ ಬೆಳಕ ತುಂಬುವರು?'

ಲಿಲ್ಲಿ ಮಾತಾಡಲಿಲ್ಲ. ಬಾಲನ ಕಣ್ಣುಗಳನ್ನು ನೋಡಿದಳು. ಅವಳು ತನ್ನ ಪುಟ್ಟ ಕರಗಳನ್ನು ಚಾಚಿದಳು. ಬಾಲ ಅವುಗಳನ್ನು ಪರಿಗ್ರಹಿಸಿದ. ಅವುಗಳನ್ನು ತನ್ನ ತುಟಿಗಳ ಬಳಿಗೆ ಒಯ್ದು ಒಮ್ಮೆ ಚುಂಬಿಸಿದ; ದೃಷ್ಟಿ ಯನ್ನು ಲಿಲ್ಲಿಯ ಮೋರೆಯ ಕಡೆಗೆ ತಿರುಗಿಸಿದ. ಅವಳ ಕಣ್ಣುಗಳಲ್ಲಿ ನೀರು ತುಂಬಿರುವುದು ಬಾಲನಿಗೆ ಗೋಚರಿಸಿತು. ಅವಳ ಕಣ್ಣುಗಳಲ್ಲಿ

ಬಾಷ್ಪಕಣಗಳು ತುಂಬಿರುವುದನ್ನು ನೋಡಿ ಬಾಲನಿಗೆ ಆಶ್ಚರ್ಯ ವಾಯಿತು. ಅವಳ ಮನಸ್ಸಿನಲ್ಲಿ ಯಾವುದೋ ಒಂದು ಚಿಂತೆಯು ತೇಲು ತಿದ್ದುದನ್ನು ಬಾಲ ನೋಡಿದ. ಮರುಕದಿಂದ ಅವನು ಹೇಳಿದ 'ಲಿಲ್ಲೀ, ನಿನ್ನ ಮನಸ್ಸನ್ನು ಯಾವುದೋ ಒಂದು ಚಿಂತೆಯು ಆವರಿಸಿದ ಹಾಗಿದೆ. ಕಣ್ಣುಗಳಲ್ಲೇಕೆ ನೀರು? ನೀನು ಕೊರಗುತ್ತಿರುವ ಹಾಗೆ ನನಗೆ ತೋರುತ್ತದೆ.'

'ಕೊರಗುವುದೇಕೆ?' ನಗಲು ಪ್ರಯತ್ನಿಸುತ್ತಾ ಲಿಲ್ಲಿ ಹೇಳಿದಳು.

'ನಿನ್ನ ಕಣ್ಣುಗಳು ಸೂಚಿಸುತ್ತಲಿವೆ ನೀನು ಕೊರಗುತ್ತಿರುವೆ ಯೆಂಬುದನ್ನು. ನಿನ್ನ ಎದೆಯಲ್ಲಿ ಅಡಗಿರುವ ವ್ಯಥೆಯು ಕಣ್ಣುಗಳ ಮೂಲಕ ಹೊರಗೆ ಹರಿಯಲು ಪ್ರಯತ್ನಿಸುತ್ತಲಿದೆ. ಲಿಲ್ಲೀ, ನೀನು ಏನೋ ಒಂದನ್ನು ನನ್ನಿಂದ ಮರೆಮಾಜುತ್ತಿರುವೆ. ನಿನ್ನೆದೆಯ ಕೊರಗೇ ನೆಂಬುದನ್ನು ನನಗೆ ಉಸುರಬಾರದೆ?—ಬಾಲನಲ್ಲಿ ನಿನಗೆ ಅಪನಂಬಿಕೆಯೇ?' ಉದ್ವೇಗಭರಿತಸ್ವರದಲ್ಲಿ ಬಾಲ ನುಡಿದ.

ಕೆಲವು ನಿಮಿಷಗಳವರೆಗೆ ಲಿಲ್ಲಿ ಮೌನದಿಂದಿದ್ದಳು. ಅನೇಕ ವಿಚಾರ ಗಳು ಅವಳ ಮೆದುಳಿನಲ್ಲಿ ಮಿಂಚಿದವು; ಮಾಯವಾದವು. ಅನೇಕ ಚಿಂತೆ ಗಳು ಅವಳ ಮನಸ್ಸಿನಲ್ಲಿ ತೇಲಿದವು, ಆದರೆ ಅವಳು ತನ್ನ ಮನಸ್ಸಿನಲ್ಲಿ ಮೂಡಿದುದನ್ನು ಹೊರಕ್ಕೆ ತರಲಿಲ್ಲ. ಎದೆಯಲ್ಲಿ ಅಡಗಿದ ಸಂಗತಿಗಳು ಹೊರಗೆ ಹರಿಯಲಿಲ್ಲ. ಮನಸ್ಸಿನಲ್ಲಿ ಮೂಡಿದ್ದ ಚಿಂತೆಗಳೆಲ್ಲ ಕಣ್ಣುಗಳಲ್ಲಿ ನೆರೆದವು; ದೃಷ್ಟಿಯ ಮೂಲಕ ಬಾಹ್ಯ ಜಗತ್ತಿನಲ್ಲಿ ಪ್ರವೇಶಿಸಲು ಪ್ರಯತ್ನಿಸಿದವು. ಅವಳ ಎದೆಯ ಭಾವಗಳನ್ನು ಸೂಚಿಸಿತು ಅವಳ ಕಣ್ಣು ಗಳ ನೋಟ!

ಆದರೆ ಲಿಲ್ಲಿಯ ಆ ಕಣ್ಣುಗಳಿಂದ ಹೊರಸೂಸಿದ ಭಾವಗಳನ್ನು ತಿಳಿಯಲು ಬಾಲ ಶಕ್ತನಾಗಲಿಲ್ಲ. ತನ್ನ ಪ್ರೀತಿಯಲ್ಲಿ ಲಿಲ್ಲಿಗೆ ಸಂದೇಹ ಹುಟ್ಟಿದೆಂಬ ವಿಚಾರವು ಅವನ ಮೆದುಳಿನಲ್ಲಿ ನುಸುಳಿತು. ಅವನು ಲಿಲ್ಲಿಯ ಎರಡು ಕೈಗಳನ್ನೂ ತನ್ನ ಎದೆಯ ಮೇಲಿಟ್ಟುಕೊಂಡು ಹೇಳಿದ. 'ಲಿಲ್ಲೀ,

ಈ ಸಂದೇಹವೇಕೆ? ನನ್ನ ಪ್ರೀತಿಯಲ್ಲಿ ನಿನಗೆ ಸಂಶಯವೇ? ನನ್ನೆದೆಯನ್ನು ಬಿಚ್ಚಿ ತೋರಿಸುತ್ತೇನೆ. ಲಿಲ್ಲಿ ನಿನಗಲ್ಲದೆ ಬೇರೆ ಯಾರಿಗೂ ಸ್ಥಳವಿಲ್ಲ.'

ಲಿಲ್ಲಿಯ ನೇತ್ರಗಳಿಂದ ಬಾಷ್ಪಕಣಗಳು ಹರಿಯತೊಡಗಿದವು. ಬಾಲ ತನ್ನ ಕರವಸ್ತ್ರದಿಂದ ಆವಳ ಕಂಬನಿಗಳನ್ನು ಒರಿಸಿದ. ಲಿಲ್ಲಿಯ ಲೋಚನಗಳಿಂದ ಉದುರುತಿದ್ದ ಅಶ್ರುಕಣಗಳು ಬಾಲನ ಎದೆಯನ್ನು ಕರಗುವಂತೆ ಮಾಡಿದವು. ಅವನು ಲಿಲ್ಲಿಯ ಕೈಗಳನ್ನು ಹಿಡಿದುಕೊಂಡು ಹೇಳಿದ. 'ಲಿಲ್ಲೀ, ನಿನಗೇನಾಗಿದೆ? ನೀನು ಕೊರಗುವುದೇಕೆ ಹೇಳು!'

'ಬಾಲ, ನೀನು ಸಿಟ್ಟಾಗಬೇಡ; ನನಗೇನಾಗಿದೆಯೆಂಬುದು ನನಗೇ ತಿಳಿಯದು. ನನ್ನ ಮನಸ್ಸಿನ ಸ್ವಾಸ್ಥ್ಯವು ಅಳಿದಿದೆಯೆಂದು ಮಾತ್ರ ಹೇಳಬಲ್ಲೆ. ನನಗೆ ಆರೋಗ್ಯವಿಲ್ಲ; ನನಗಾಗಿ ನೀನು ತೊಂದರೆಪಡಬೇಡ.'

'ಲಿಲ್ಲೀ, ನಿನ್ನ ವರ್ತನೆಯಿಂದ ನನಗೆ ವಿಸ್ಮಯವಾಗುತ್ತಲಿದೆ. ನಿನ್ನ ಮನಸ್ಸನ್ನು ಕೊರೆಯುತ್ತಿರುವ ಚಿಂತೆಯೇನೆಂದು ಒಮ್ಮೆ ಹೇಳು. ನನ್ನ ಪ್ರೀತಿಯಲ್ಲಿ ನಿನಗೆ ಸಂದೇಹ ಹುಟ್ಟಿದ್ದರೆ ತಿಳಿಸು. ಲಿಲ್ಲೀ, ನಿನ್ನ ಈ ವ್ಯಥೆಯನ್ನು ನೋಡುವಾಗ ನನಗೆ ಸಂಕಟವಾಗುತ್ತಲಿದೆ.'

'ಬಾಲ, ನೊಂದುಕೊಳ್ಳಬೇಡ; ಅದೇನೆಂಬುದು ತಾನಾಗಿಯೇ ತಿಳಿವುದು ನಿನಗೆ. ನಿನ್ನ ಪ್ರೇಮದಲ್ಲಿ ನನಗೆ ಸಂಶಯವಿಲ್ಲ. ಅದು ತಿಳಿಯಾದುದೆಂಬುದನ್ನು ನಾನು ಬಲ್ಲೆ. ಅದು ಕನ್ನಡಿಯಂತೆ ಸ್ವಚ್ಛವಾದುದಾಗಿದೆ. ನನ್ನ ಬಾಲ,– ಅಹುದು, ನೀನು ಯಾವಾಗಲೂ ನನ್ನವನೇ–' ಅನಂತರ ಲಿಲ್ಲಿಯ ಕೊರಳಿಂದ ನುಡಿಯು ಹೊರಗೆ ಬರಲಿಲ್ಲ.

ಇನ್ನು ಆ ಸಂಗತಿಯನ್ನು ಕುರಿತು ಮಾತಾಡುವುದರಿಂದ ಲಿಲ್ಲಿಯ ಮನಸ್ಸನ್ನು ನೋವು ಪಡಿಸಿದಂತಾಗುವುದೆಂದು ಬಾಲ ವಿಚಾರಿಸಿದ. ಆದುದರಿಂದ ಆ ವಿಷಯವನ್ನು ಕುರಿತು ಅವನು ಹೆಚ್ಚಿಗೆ ಮಾತಾಡಲಿಲ್ಲ. ಲಿಲ್ಲಿಯ ಆರೋಗ್ಯ ಉತ್ತಮವಾದ ಮೇಲೆ ಆವಳ ಕೊರಗು ಏನೆಂದು ತಿಳಿಯಬಹುದೆಂದು ಅವನು ನೆನಸಿದ. ಅವನು ಮೌನದಿಂದ ಲಿಲ್ಲಿಯ

ಮೋರೆಯನ್ನು ನೋಡತೊಡಗಿದ. ಅವಳ ಚೆಲುವು ಕಣ್ಣುಗಳನ್ನು ದರ್ಶಿಸಿದ. ಆ ಕಣ್ಣುಗಳಿಂದ ಹೊರಸೂಸುತಿದ್ದ ಕಾಂತಿಯ ಮೂಲಕ ಅವಳ ಅಂತರಂಗವನ್ನು ತಿಳಿಯಲು ಬಾಲ ಪ್ರಯತ್ನಿಸಿದ.

ಲಿಲ್ಲಿಯೂ ಮಾತಾಡಲಿಲ್ಲ; ಬಾಲನ ಮೋರೆಯನ್ನು ನೋಡುತಿದ್ದಳು. ಒಬ್ಬರ ಕಣ್ಣುಗಳನ್ನು ಇನ್ನೊಬ್ಬರು ನೋಡುತ್ತಾ ಅವರಿಬ್ಬರು ಅಲ್ಲಿ ಕುಳಿತಿದ್ದರು.

'ನಾನು ಹೋಗಲೇ ಲಿಲ್ಲೀ?' ಬಾಲ ಪ್ರಶ್ನಿಸಿದ.

'ಹೂಂ.' ಎಂದಾಗಿತ್ತು ಲಿಲ್ಲಿಯ ಉತ್ತರ.

'ನಾಳೆ ಬರುವೆನು ಲಿಲ್ಲೀ; ಆಗ ನಿನ್ನ ಮಾನಸಿಕ ವ್ಯಥೆಯ ಕಾರಣವನ್ನು ಉಸುರುವೆಯಷ್ಟೆ.'

ತನ್ನ ಚೇರಿನಿಂದ ಎದ್ದುನಿಂತ ಬಾಲ. ಅವನ ಸಿರವು ಬಾಗಿತು. ಅವನ ತುಟಿಗಳು ಲಿಲ್ಲಿಯ ಮೋರೆಯ ಕಡೆಗೆ ಸರಿದವು. ಒಂದು ಚುಂಬನ ಮುದ್ರೆಯು ಅವಳ ಕನ್ನೆಯ ಮೇಲೆ ಮೂಡಿತು.

ಬಾಲ ಹೊರಕ್ಕೆ ತೆರಳಿದ.

ಅವನು ಹೊರಗೆ ಹೋಗಲು ಲಿಲ್ಲಿ ತನ್ನ ಕೋಣೆಯ ಕದಗಳನ್ನು ಮುಚ್ಚಿ ಅಗಣಿ ಹಾಕಿದಳು. ಆ ಮೇಲೆ ತನ್ನ ಹಾಸಿಗೆಯ ಮೇಲೆ ಬಿದ್ದು ಅವಳು ಹೊರಳಾಡಿದಳು. ಅವಳ ಎದೆಯಲ್ಲಿನ ಉರಿಯನ್ನು ತಣಿಸುವುದಕ್ಕಾಗಿ ಕಣ್ಣುಗಳಿಂದ ಬಾಷ್ಪಸಲಿಲವು ಹರಿದಿತು. ಕೋಣೆಯ ನಾಲ್ಕು ಗೋಡೆಗಳು ಲಿಲ್ಲಿ ಅಳುತಿದ್ದುದನ್ನು ನೋಡಿದವು.

೫

ಎಂದಿಗಿಂತ ಜಾಗ್ರತೆಯಾಗಿ ಬಾಲ ಅಂದು ಪೀಟರಿನ ವಸತಿಗೆ ಗಮಿಸಿದ. ಆದರೆ ಲಿಲ್ಲಿ ಗೋಚರಿಸಲಿಲ್ಲ ಅಲ್ಲಿ ಬಾಲನಿಗೆ. ಅವಳು ಅಲ್ಲಿರ ಲಿಲ್ಲ. ಎಂದಿನಂತೆ ಪೀಟರಿನ ಸಂಗಡ ನಾಲ್ಕಾರು ಮಾತುಗಳನ್ನಾಡಿದ. ಮೇಜದ ಮೇಲಿದ್ದ 'ಹಿಂದೂ'ವನ್ನು ತೆಗೆದು ಅದರ ಹಾಳೆಗಳನ್ನು ಮಗುಚಿ ಹಾಕಿದುದಾಯಿತು.

ಲಿಲ್ಲಿ ಊರಲ್ಲಿಲ್ಲವೆಂದೂ, ಹಳ್ಳಿಯಲ್ಲಿ ವಾಸಿಸುತ್ತಿರುವ ತನ್ನ ಚಿಕ್ಕಮ್ಮನ ವಸತಿಗೆ ತೆರಳಿದಳೆಂದೂ ಪೀಟರ್ ಬಾಲನಿಗೆ ಹೇಳಿದ. ಲಿಲ್ಲಿ ತನ್ನೊಡನೆ ಹೇಳದೆ ಊರುಬಿಟ್ಟದ್ದು ಬಾಲನಲ್ಲಿ ಬಹು ಆಶ್ಚರ್ಯ ವನ್ನುಂಟುಮಾಡಿತು. ಅವಳು ಹೀಗೆ ಹೇಳದೆ ಹೋಗಲು ಕಾರಣವೇನೆಂದು ಅವನು ಚಿಂತಿಸಿದ. ಕಳೆದ ಸಂಜೆಯಲ್ಲಿ ಜರುಗಿದ ಸಂಭವಗಳು ಅವನ ಸ್ಮೃತಿಪಥದಲ್ಲಿ ಪ್ರವೇಶಿಸಿದವು. ಸಂದೇಹ, ಸಂಶಯಗಳು ಅವನ ಮನಸ್ಸಿ ನಲ್ಲಿ ನುಳಿದವು. ಲಿಲ್ಲಿ ಊರುಬಿಟ್ಟುದುದೇಕೆ? ನಿನ್ನೆ ದಿನ ಅವಳು ಕೊರಗುತಿದ್ದುದೇಕೆ? ಎಂಬಿತ್ಯಾದಿ ಅನೇಕ ಪ್ರಶ್ನೆಗಳು ಅವನ ಚಿತ್ತದಲ್ಲಿ ತೇಲಿದವು. ಈ ಪಶ್ನೆಗಳಿಗೆ ಸಮರ್ಪಕವಾದ ಉತ್ತರಗಳು ದೊರಕಲಿಲ್ಲ. ಈ ಸಮಸ್ಯೆಯನ್ನು ಬಿಡಿಸಲು ಬಾಲನಿಂದಾಗಲಿಲ್ಲ. ಲಿಲ್ಲಿ ತನ್ನನ್ನು ಪ್ರೀತಿಸುವುದಿಲ್ಲವೇ? ಛೀ! ಹಾಗಲ್ಲ; ಅವಳ ಕಣ್ಣುಗಳು! ಹಾಗಾದ ರೇನು? ತನ್ನಲ್ಲಿ ಅವಳಿಗೆ ಸಂದೇಹವೇ? ತನ್ನ ಪ್ರೇಮದಲ್ಲಿ ಸಂಶಯವೇ? ಸರಿಯಲ್ಲ. ಕನ್ನಡಿಯಂತೆ ಅದು ಸ್ವಚ್ಛವಾದುದೆಂದು ಲಿಲ್ಲಿ ಕಳೆದ ಸಂಜೆ ಯಲ್ಲಿ ನುಡಿದುದು ಅವನಿಗೆ ನೆನಪಾಯಿತು. ತನ್ನನ್ನು ಪ್ರೀತಿಸುತಿದ್ದಾಳೆ; ಆದರೆ ತನಗೆ ತಿಳಿಯದಂತೆ ಅವಳು ಊರುಬಿಟ್ಟು ಹೋದುದೇಕೆ? ಅವಳು ತನ್ನ ಕೊರಗನ್ನು ಉಸುರದಿದ್ದುದೇಕೆ? ಹೀಗೆ ನೂರಾರು ಸಂದೇಹಗಳ

ದೋಣಿಗಳು ಬಾಲನ ಚಿತ್ತದಲ್ಲಿ ತೇಲಿದವು. ಮನಸ್ಸೊಂದು ಗರಡೀ ಮನೆಯಾಯಿತು. ತರ್ಕವಿತರ್ಕಗಳು ಅಲ್ಲಿ ಜರಗಿದವು. ಆದರೆ ಅವನ ಮುಂದಿರುವ ಸಮಸ್ಯೆಗೆ ಸಮರ್ಪಕವಾದ ಉತ್ತರವು ದೊರಕಲಿಲ್ಲ. ಏಕೆ? ಎಂಬುದು ಅವನ ಮುಂದೆ ಕುಣಿದಿತು. ಲಿಲ್ಲಿ ಏಕೆ ಹೋದಳು? ಏಕೆ ಕೊರಗಿದಳು? ಅವಳಿಗೆ ಏನಾಗಿದೆ?

ಪೀಟರಿನ ವಸತಿಯಲ್ಲಿ ಬಾಲ ಹೆಚ್ಚು ಹೊತ್ತು ನಿಲ್ಲಲಿಲ್ಲ. ಲಿಲ್ಲಿ ಅಲ್ಲಿ ಇಲ್ಲದುದರಿಂದ ಅವನಿಗೆ ಅಲ್ಲಿ ಹೆಚ್ಚು ಹೊತ್ತು ಇರಲು ಆಸಕ್ತಿ ತೋರಲಿಲ್ಲ. ತನ್ನ ಕೋಣೆಗೆ ಬಂದು ಒಬ್ಬನೇ ಆಲೋಚಿಸಬೇಕಾಗಿದ್ದಿತು. ಲಿಲ್ಲಿ ಹೋದುದೇಕೆಂಬುದನ್ನು ತಿಳಿಯಬೇಕಾಗಿದ್ದಿತು. ಆದುದರಿಂದ ಪೀಟರಿನೊಡನೆ ನಾಲ್ಕಾರು ಮಾತುಗಳನ್ನಾಡಿದ ಮೇಲೆ ತನ್ನ ಮನೆಯ ಕಡೆಗೆ ಬಾಲ ಹೊರಟ.

ತನ್ನ ಮನೆಯನ್ನು ಸೇರಿದುದಾಯಿತು. ಕೋಣೆಯ ಬಾಗಿಲುಗಳನ್ನು ಬಾಲ ಬಿಚ್ಚಿದ. ಮೈಮೇಲಿನ ಕೋಟನ್ನು ತೆಗೆದು ಗೋಡೆಯ ಮೇಲಿನ ಒಂದು ಗೂಟಕ್ಕೆ ನೇತು ಹಾಕಿದ. ಈಜೀಚೇರಿನ ಮೇಲೆ ಆಸೀನನಾದ ಬಾಲ. ಒಂದು ಸಿಗರೇಟನ್ನು ಜೇಬಿನಿಂದ ತೆಗೆದು ಅದನ್ನು ಹೊತ್ತಿಸಿದ; ಹೊಗೆಯನ್ನು ಸೇದುತ್ತಾ ಬಾಲ ಆಲೋಚನಾಮಗ್ನನಾದ.

ಸಿಗರೇಟನ್ನು ಸೇದಿ ಮುಗಿಸಿರಲಿಲ್ಲ. ಅವನ ಆಲೋಚನೆಯು ಮುಗಿದಿರಲಿಲ್ಲ. 'ಬಾಲ' ಎಂಬ ಸ್ವರವು ಬಂದು ಅವನ ಕರ್ಣೇಂದ್ರಿಯಗಳಲ್ಲಿ ಬಿದ್ದಿತು. ಬಾಯಿಯಿಂದ ಸಿಗರೇಟು ತೆಗೆದು ಬಾಲ ತಲೆಯೆತ್ತಿ ನೋಡಿದ. ಅವನಕ್ಕ ಗಂಗೆ ಬಾಲನ ರೂಮಿಗೆ ಬರುತಿದ್ದುದು ಅವನಿಗೆ ಗೋಚರಿಸಿತು. ಅವನು ತನ್ನ ಆಸನದಿಂದ ಏಳದೆ, 'ಏನಕ್ಕಾ?' ಎಂದು ಪ್ರಶ್ನಿಸಿದ.

'ನೋಡು ಬಾಲ, ನಿನಗೊಂದು ಕಾಗದ. ನೀನು ಹೊರಗೆ ಹೋಗಿದ್ದಾಗ ಪೇದೆಯು ಅದನ್ನು ತಂದುಕೊಟ್ಟ.' ಅಕ್ಕ ಕಾಗದವನ್ನು ಹಿಡಿದಿದ್ದ ಕೈಯನ್ನು ಬಾಲನ ಕಡೆಗೆ ಚಾಚಿದಳು. ಬಾಲ ಅಕ್ಕನ ಹಸ್ತದಿಂದ ಆ ಕಾಗದವನ್ನು ಸ್ವೀಕರಿಸಿದ.

ಬಾಲನಿಗೆ ಕಾಗದವನ್ನು ಕೊಟ್ಟ ಅನಂತರ ಅಕ್ಕ ಅಲ್ಲಿಂದ ಹೊರಟು ಹೋದಳು. ಮೊದಲು ಬಾಲ ಕವರಿನ ಮೇಲೆ ಬರೆದಿದ್ದ ವಿಳಾಸದ ಕಡೆಗೆ ತನ್ನ ದೃಷ್ಟಿಯನ್ನು ಹೊರಳಿಸಿದ. ಅದರ ಮೇಲಿನ ಕೈ ಅಕ್ಷರಗಳನ್ನು ನೋಡಿದೊಡನೆಯೇ ಅದು ಯಾರದೆಂಬುದು ಬಾಲನಿಗೆ ತಿಳಿದಿತು; ಆ ಕೈಬರಹವು ಅವನಿಗೆ ಚಿರಪರಿಚಯವಿದ್ದುದಾಗಿದ್ದಿತು. ಎಷ್ಟೋ ಸಲ ಮುದ್ದಾದ ಆ ಕೈಬರಹವನ್ನು ಅವನು ನೋಡಿದ್ದ; ಅದನ್ನು ಪ್ರಶಂಸಿಸಿದ್ದ. ಅದು ಬೇರೆ ಯಾರ ಕಾಗದವೂ ಆಗಿರಲಿಲ್ಲ; ಅದು ಲಿಲ್ಲಿಯದಾಗಿದ್ದಿತು.

ಲಿಲ್ಲಿ ಬರೆದ ಓಲೆಯೆಂದು ತಿಳಿಯಲು, ಅವಳು ಬರೆದುದೇನೆಂಬುದನ್ನು ಅರಿಯಲು ಬಾಲ ಕವರನ್ನು ಒಡೆದು ಅತ್ಯಾತುರದಿಂದ ಕಾಗದವನ್ನು ಓದತೊಡಗಿದ; ಅವಳು ಅದರಲ್ಲಿ ಬರೆದಿದ್ದ ವಿಷಯಗಳನ್ನು ಗ್ರಹಿಸುವುದರಲ್ಲಿ ಉದ್ಯುಕ್ತನಾದ.

ಲಿಲ್ಲಿ ಆ ಕಾಗದದಲ್ಲಿ ಹೀಗೆ ಬರೆದಿದ್ದಳು :—

ನನ್ನ ಬಾಲ,

ನೀನು ಸಿಟ್ಟಾಗಬೇಡ; ನನ್ನ ವ್ಯಥೆಯನ್ನು ಕಂಡು ನಿನಗೆ ನಿನ್ನೆ ದಿನ ಆಶ್ಚರ್ಯವಾಗಿರಬಹುದು. ನಾನು ಸಂಶಯ ಹೊಂದಿರುವೆನೆಂಬ ಭಾವನೆಯು ನಿನ್ನಲ್ಲಿ ಹುಟ್ಟಿರಬಹುದು; ಎಲ್ಲದಕ್ಕಿಂತಲೂ ಹೆಚ್ಚಾಗಿ, ನಿನ್ನೊಡನೆ ಉಸುರದೆ ನಾನು ಊರನ್ನು ಬಿಟ್ಟದ್ದು ನಿನ್ನನ್ನು ವಿಸ್ಮಯಗೊಳಿಸಿರಬಹುದು. ಈ ಒಗ್ಗೆ ನಿನ್ನ ಮನಸ್ಸಿನಲ್ಲಿ ಅನೇಕ ತರ್ಕವಿತರ್ಕಗಳು ನಡೆದಿರಲಿಕ್ಕೆ ಸಾಕು. ನೋಡು, ಈ ಕಾಗದದಲ್ಲಿ ನಾನು ಕೊರಗಿದುದೇಕೆ; ನಿನಗೆ ಹೇಳದೆ ಊರು ಬಿಟ್ಟುದುದೇಕೆ; ಎಂಬೀ ಸಂಗತಿಗಳನ್ನು ನಿನಗೆ ಅರುಹಲು ಹೊರಟಿರುವೆನು. ಈ ಕಾಗದವನ್ನು ಓದುವುದರಿಂದ ನಿನ್ನ ಮನಸ್ಸಿನಲ್ಲಿ ಮೂಡಿದ ಸಂದೇಹಗಳು ಇಲ್ಲದಾಗುವುವೆಂದು ನನ್ನ ನಂಬಿಕೆಯಾಗಿದೆ.

ನಿನ್ನ ಪ್ರೀತಿಯ ಬಗ್ಗೆ ನನಗೆ ಸಂದೇಹವಿದೆಯೆಂದು ನೀನು ಧರಿಸಿರುವ ಹಾಗಿದೆ. ಆದರೆ ನೋಡು, ನಿನ್ನ ಅಂತರಂಗವನ್ನು ನಾನು

ಬಲ್ಲೆ. ಅದು ತಿಳಿಯಾದುದೆಂದು ನಾನರಿತಿರುವೆ. ನಿನ್ನ ಜೀವನದ ಪಾಲು ಗಾರಳಾಗಲು ನಾನು ಸಿದ್ಧಳಿದ್ದೆ. ಆದರೆ ಆ ಹಾದಿಯಲ್ಲಿ ಒಂದು ಪ್ರತಿ ಬಂಧವಿದೆ; ಆ ಗೋಡೆಯನ್ನೊಡೆದು ಮುಂದೆ ಬರಲು ನೀನು ತಯಾ ರಿರುವೆಯೆಂಬುದು ನನಗೆ ಗೊತ್ತು. ಆದರೆ ನೋಡು, ನಿನ್ನ ಆ ಕೆಲಸದಿಂದ ಒಂದು ತಾಯಿಯ ಹೃದಯವು ಕೊರಗಬೇಕಾಗಿ ಬರುತ್ತದೆ; ಒಡಹುಟ್ಟಿ ದಾಕೆಯ ಕಣ್ಣೀರ ಕಾಲುವೆಯನ್ನು ನೀನು ನೋಡಬೇಕಾಗಿ ಬರುತ್ತದೆ! ತಾಯಿಯ ನೋವು, ಒಡಹುಟ್ಟಿದವಳ ಕಣ್ಣೀರು, ಇವು ನನ್ನನ್ನು ನಿನ್ನಿಂದ ದೂರ ಸರಿಯಲು ಪ್ರೇರಿಸಿದುವು; ಅಹುದು, ನಿನ್ನ ಹೆತ್ತ ತಾಯಿಯ ಎದೆಯನ್ನು ನೋವು ಮಾಡದಿರುವುದಕ್ಕಾಗಿ,–ಬಿಸಿಲನ್ನು ಪರಿತ್ಯಜಿಸಿ ಕತ್ತಲೆಗೆ,–ಇರುಳಿಗೆ ತೆರಳಲು ಹೊರಟಿರುವೆನು!

ನೋಡು ಬಾಲ, ನಾನು ವಿಶದವಾಗಿ ಹೇಳುತ್ತೇನೆ. ಒಂದು ವೇಳೆ ಈ ಕಾಗದವು ನಿನ್ನನ್ನು ಬಹಳ ನೋವು ಪಡಿಸಬಹುದು. ನಿನ್ನೆ ದಿನ ಅಣ್ಣ ಆಫೀಸಿಗೆ ಹೋಗಿದ್ದಾಗ, ನನ್ನನ್ನು ಕಾಣಲು ಇಬ್ಬರು ಹೆಂಗಸರು ನಮ್ಮ ಮನೆಗೆ ಬಂದಿದ್ದರು. ಅವರು ಬೇರೆ ಯಾರೂ ಆಗಿರಲಿಲ್ಲ. ಅವರು ನಿನ್ನ ತಾಯಿ. ಮತ್ತು ಅಕ್ಕ ಇವರೆಂಬುದು ಅನಂತರ ತಿಳಿದಿತು. ನನಗೆ· ಅವರು ಬಂದುದೇಕೆಂಬುದನ್ನು ನಾನು ಸುಲಭದಲ್ಲಿ ತಿಳಿದುಕೊಂಡೆ· ನಿನ್ನಿಂದ ನನ್ನನ್ನು ದೂರವಿರಿಸುವುದಕ್ಕಾಗಿ ಅವರು ಬಂದಿದ್ದರು.

ಅವರ ಈ ಅಧಿಕ ಪ್ರಸಂಗವನ್ನು ಕಂಡು ಮೊದಲು ನನಗೆ ಸಿಟ್ಟು ಬಂದಿತು. ಈ ಕೆಲಸದಲ್ಲಿ ಇತರರು ಕೈ ಹಾಕಬೇಕಾದ ಅವಶ್ಯವೇನೆಂದು ನಾನು ಅವರನ್ನು ಪ್ರಶ್ನಿಸಿದೆ; ಕಠಿಣವಾಗಿ ಒಂದೆರಡು ಮಾತುಗಳನ್ನಾಡಿದೆ ನಾನು. ಆದರೆ ನಿನ್ನ ತಾಯಿ ನನ್ನೊಡನೆ ಸಿಟ್ಟು ಮಾಡಿಕೊಳ್ಳಲಿಲ್ಲ. ಅವರು ಬಿರು ಮಾತುಗಳನ್ನಾಡಲಿಲ್ಲ. ಅವರು ತಮ್ಮ ಮೋರೆಯನ್ನು ಕಿರಿದು ಮಾಡಿಕೊಂಡರು; ಕಣ್ಣುಗಳಲ್ಲಿ ನೀರು ತಂದುಕೊಂಡರು. ಅವರ ನಾಲಿಗೆಯಿಂದ ಈ ಮಾತುಗಳು ಉದುರಿದವು 'ಮಗೂ ನಿನಗೆ ಅವ್ವ ನಿಲ್ಲವೇ?'

ಈ ನುಡಿಯು ನನ್ನ ಮನಸ್ಸಿನಲ್ಲಿ ನನ್ನ ಅವ್ವನ ಸ್ಮರಣೆಯುದಿಸು

ವಂತೆ ಮಾಡಿತು. ನನ್ನ ಎಳೆತನದಲ್ಲಿಯೇ ನನ್ನನ್ನು ಬಿಟ್ಟು ಪರಲೋಕಕ್ಕೆ ಹೋದ ನನ್ನ ತಾಯಿಯ ಬಿಂಬವು ಮನಸ್ಸಿನಲ್ಲಿ ತೇಲತೊಡಗಿತು. ನನ್ನ ಅವ್ವ,– ನನಗೆ ಸ್ನೇಹ ಮಮತೆಗಳ ತಿಳಿ ನೀರನ್ನು ಕುಡಿಸಿದ ತಾಯಿ,– ಇಲ್ಲವಲ್ಲವೆಂಬ ದುಃಖವು ನನ್ನ ಅಂತರಂಗದಲ್ಲಿ ಜನಿಸದಿರಲಿಲ್ಲ. ಅವ್ವನ ನನ್ನು ಕುರಿತು ನೂರಾರು ವಿಚಾರಗಳು ನನ್ನ ಮೆದಳಿನಲ್ಲಿ ಮಿಂಚಿದವು; ಚಿಂತೆಗಳ ದೋಣಿಗಳು ನನ್ನ ಚಿತ್ತದಲ್ಲಿ ತೇಲಾಡಿದವು! ‘ ಇಲ್ಲ; ಅವ್ವ ನಾನು ಚಿಕ್ಕವಳಿರುವಾಗಲೇ ಹೊರಟು ಹೋದಳು!’ ಎಂದು ನಿನ್ನ ತಾಯಿಗೆ ಜವಾಬು ಹೇಳಿದೆ ನಾನು.

‘ಮಗೂ, ನಿನಗೆ ಅವ್ವನಿಲ್ಲದುದರಿಂದ ತಾಯಿಯ ಪ್ರೇಮವು ಎಷ್ಟು ಆಳವಾದುದೆಂಬುದು ನಿನಗೆ ತಿಳಿಯದು.’ ನಿನ್ನ ತಾಯಿ ಅಂದರು. ನಾನು ಮೌನದಿಂದ ಅವರ ಮಾತುಗಳನ್ನು ಕೇಳುತಿದ್ದೆ. ‘ ನೋಡು ಮಗೂ, ನೀನು ಊಹಿಸು ನನ್ನ ಕೊರಗು ಎಷ್ಟು ತೀಕ್ಷ್ಣವಾಗಿರಬಹುದೆಂದು! ನಾನು ಸಾಕಿ ಸಲಹಿದ ಬಾಲ ನನ್ನಿಂದ ದೂರ ಹೋಗಲು ಹೊರಟಿದ್ದಾನೆ!’

ಹೀಗೆ ಅವರು ಹೇಳುತಿದ್ದರು; ನಾನು ಕೇಳುತಲಿದ್ದೆ. ಅವ ಎದೆಯು ಬಹು ನೊಂದಿದೆಯೆಂದು ನಾನು ತಿಳಿದುಕೊಂಡೆ. ಅವರೊಡನೆ ಏನನ್ನ ಬೇಕೆಂಬುದು ನನಗೆ ತಿಳಿಯಲಿಲ್ಲ.

ಅವರು ಹೇಳುತಿದ್ದರು ಬಾಲ; ನಿನ್ನ ತಾಯಿ ನುಡಿಯುತಿದ್ದರು; ನಾನು ಕೇಳುತಿದ್ದೆ. ಅವರ ನೀರು ತುಂಬಿದ ಕಣ್ಣುಗಳನ್ನು ನೋಡುತ್ತಾ ಕೇಳುತ್ತಲಿದ್ದೆ. ಅವರ ನೊರಗಿದ ಮುಖ, ಕೆಂಪಾದ ಕಣ್ಣುಗಳು, ಇವು ಗಳು ಇನ್ನೂ ನನ್ನ ಮನಸಿನಿಂದ ಮಾಜಿಲ್ಲ. ಕಣ್ಣುಗಳಿಂದ ಹರಿದು ಬರು ತಿದ್ದ ಅಶ್ರು ಪ್ರವಾಹದ ರೂಪದಿಂದ ಹೊರಬಂದಿತು ಅವರ ಎದೆಯಲ್ಲಿ ಅಡಗಿದ್ದ ಪುತ್ರ ಪ್ರೇಮ, ಸಂತಾನ ವಾತ್ಸಲ್ಯ! ನನಗೆ ಅವ್ವ ಇದ್ದಿದ್ದರೆ, ನಿನ್ನ ತಾಯಿ ನಿನ್ನನ್ನು ಪ್ರೀತಿಸುತ್ತಿರುವಂತೆ,– ನಿನಗೆ ಸ್ನೇಹ ಮಮತೆ ಗಳ ಸಿಹಿನೀರನ್ನು ಕುಡಿಸಿದಂತೆ,– ಕಂದನ ಮೋರೆಯನ್ನು ನೋಡಿ ತನ್ನ ದುಃಖವನ್ನು ಮರೆತಂತೆ,– ನನ್ನನ್ನೂ ನೋಡುತ್ತಿರಲಿಲ್ಲವೇ? ಸ್ನೇಹ

ಮಮತೆಗಳ ಸಿಹಿ ನೀರನ್ನು ನನಗೆ ಕುಡಿಸುತ್ತಿರಲಿಲ್ಲವೇ ?– ಹೀಗೆ ಅನೇಕ ಚಿಂತೆಗಳು ಮೂಡಿದವು; ತೇಲಿದವು ನನ್ನ ಚಿತ್ತದಲ್ಲಿ!

ಅವರು ಬಂದಿದ್ದರು ತಮ್ಮ ಮಗನನ್ನು ಬೇಡುವುದಕ್ಕಾಗಿ! ಅವರ ನೇತ್ರಗಳಿಂದ ಬಾಷ್ಪಬಿಂದುಗಳು ಉಕ್ಕಿಹರಿಯುತ್ತಿದ್ದವು. ಅವರು ನನ್ನನ್ನು ಹೀಗೆ ಯಾಚಿಸಿದರು.–' ನನ್ನ ಮಗನನ್ನು ನನಗೆ ಕೊಡು.' ಎಂದು ಅವರು ತಮ್ಮ ಮಗನನ್ನು ಬೇಡಿದರು. ' ಮಗೂ, ಸಿಟ್ಟಾಗಬೇಡ, ಪ್ರಾಯದಲ್ಲಿ ನಾನು ನಿನಗಿಂತ ಹಿರಿಯಳು. ಆದರೆ ನಿನ್ನ ಕಾಲುಗಳಿಗೆ ಬಿದ್ದು ಈಗ ಬೇಡುತ್ತಲಿರುವೆ. ನನ್ನ ಮಗನನ್ನು ನನಗೆಕೊಡು. ಅವನನ್ನು ನನ್ನಿಂದ ದೂರಕ್ಕೆ ಸೆಳೆದೊಯ್ಯಬೇಡ. ಅವನು ನನ್ನಿಂದ ದೂರ ತೆರಳಿದರೆ ನಾನು ಜೀವಿಸಲಾರೆ! '

ಆ ಚಿತ್ರವು ಈಗಲೂ ನನ್ನ ಕಣ್ಣುಗಳ ಮುಂದೆ ನಿಂತಿದೆ. ಕಂಬನಿ ಕರೆದು ಅವರು ಯಾಚಿಸಿದ ದೃಶ್ಯವು ಈಗಲೂ ನನ್ನ ಮನಸ್ಸಿನಿಂದ ಅಳಿಸಿಲ್ಲ. ನಿನ್ನ ತಾಯಿ,– ಅವರು ವಯಸ್ಸಿನಲ್ಲಿ ನನಗಿಂತ ಹಿರಿಯರು,– ಅನ್ಯ ಜಾತಿಯ, ಅನ್ಯ ಮತದ ಹುಡುಗಿಯೊಡನೆ ಯಾಚಿಸುತಿದ್ದರು. ಅವರ ಆ ಸಂತಾನವಾತ್ಸಲ್ಯ,–ಆ ತಾಯಿಯ ಹೃದಯ ನನ್ನ ಅಂತರಂಗದಲ್ಲಿ ಅಲೆಗಳನ್ನೆಬ್ಬಿಸಿದವು. ಅವರ ಶೋಕಕ್ಕೆ ಕಾರಣವೇನು? ನಮ್ಮಿಬ್ಬರ ಪ್ರೇಮ!

ಬಾಲ, ನಾನು ಹೆಣ್ಣು; ಆದುದರಿಂದ ಇನ್ನೊಂದು ಎದೆಯ ನೋವನ್ನು ಗಂಡಸಿಗಿಂತ ಹೆಚ್ಚಾಗಿ ನಾನು ತಿಳಿಯಬಲ್ಲೆ. ನಿನ್ನ ತಾಯಿಯ ವ್ಯಥೆಯು ನನ್ನ ಎದೆಯನ್ನು ಕರಗಿಸಿತು. ನೀರು ತುಂಬಿದ ಅವರ ಕಣ್ಣುಗಳು ನನ್ನ ಮನಸ್ಸನ್ನು ಮಿದುವಾಗುವಂತೆ ಮಾಡಿದವು. ತಾಯಿಯ ಮನದ ನೋವು, ಇದಕ್ಕಿಂತಲೂ ದುಸ್ಸಹವಾದುದು ಈ ಲೋಕದಲ್ಲಿ ಬೇರೊಂದಿದೆಯೋ ಎಂದು ನಾನು ನನ್ನನ್ನೇ ಪ್ರಶ್ನಿಸಿದೆ. ತಾಯಿಯ ಎದೆಯಲ್ಲಿ ' ಹರಿವ ಮಮತೆ 'ಗಿಂತ ಉಜ್ವಲವಾದುದು ಮತ್ತು ಸ್ವಚ್ಛವಾದುದು ಬೇರೊಂದಿದೆಯೋ? ತನ್ನ ನೋವನ್ನು ಮರೆತು ಕಂದನ ನಗುವನ್ನು ಕಂಡು ಆನಂದಿಸತಕ್ಕ ಹೃದಯಕ್ಕೆ ಕಂದನ ಅಗಲಿಕೆಯಿಂದ ಉಂಟಾಗತಕ್ಕ ಶೋಕಕ್ಕಿಂತ ತೀವ್ರವಾದ ನೋವು ಇನ್ನೊಂದಿದೆಯೋ? ಹೀಗೆ ಅನೇಕ ಪ್ರಶ್ನೆಗಳು ನನ್ನ ಮುಂದೆ ಬಂದು ನಿಂತವು.

ನೋಡು, ಬಾಲ, ಹೀಗೆ ಅನೇಕ ವಿಚಾರಗಳು ಪರಸ್ಪರ ನಡೆಸಿದ ಮಲ್ಲಯುದ್ಧಗಳ ಗರಡೀಮನೆಯಾಯಿತು ನನ್ನ ಮನಸ್ಸು. ತಾಯಿ ಎದೆಯಿಂದ ಹರಿಯುತಕ್ಕ ಸಂತಾನವಾತ್ಸಲ್ಯವು ನನ್ನನ್ನು ಸೋಲಿಸಿತು; ಪರಾಜಯಗೊಳಿಸಿತು. ಬಾಲ, ನಿನ್ನ ತಾಯಿಯಲ್ಲಿ ನೊದಲಿನಂತೆ ಹರಿಯುತಿದ್ದ ಸಂತಾನವಾತ್ಸಲ್ಯವನ್ನು ನಾನು ನೋಡಿದೆ! ಅದರ ಮುಂದೆ ನಮ್ಮ ಪ್ರೇಮವು ಮಿಂಚುಹುಳದ ಥಳಕಿನಂತೆ ತೋರಿತು. ಆ ಬೆಳಕಿನ ಮುಂದೆ ನಾನು ನನ್ನ ತಲೆಯನ್ನು ತಗ್ಗಿಸಬೇಕಾಗಿ ಬಂದಿತು. 'ನನ್ನ ಮಗನನ್ನು ನನಗೆ ಕೊಡು' ಎಂಬ ನಿನ್ನ ತಾಯಿಯ ಮಾತುಗಳು ನನ್ನ ಕಿವಿಗವಿಗಳಲ್ಲಿ ಪ್ರತಿಧ್ವನಿಸಿದವು. ಆಗ ನನ್ನಲ್ಲಿ ಮೂಡಿದ ಭಾವಗಳನ್ನು ನನ್ನಿಂದ ಬಣ್ಣಿಸಲಸದಳವು.

'ತಾಯಿಯಿಂದ ಮಗನನ್ನು ಅಗಲಿಸುವುದೇ?' ನೋಡು ಬಾಲ ಹೀಗೆ ನಾನು ವಿಚಾರಿಸಿದೆ. ಮಗನ ಅಗಲಿಕೆಯಿಂದ ಬೆಂದು ಕೊರಗುವ ತಾಯಿಯ ಎದೆಯ ಮೇಲೆ ನಮ್ಮ ಭವಿಷ್ಯಜ್ಜೀವನದ ರಮ್ಯ ಹರ್ಮ್ಯವನ್ನು ನಿರ್ಮಿಸುವುದೇ ಎಂದು ನಾನು ನನ್ನನ್ನೇ ಪ್ರಶ್ನಿಸಿದೆ. ಬಾಲ, ಸಿಟ್ಟಾಗಬೇಡ; ನಿನ್ನ ತಾಯಿಯ ನುಡಿಗಳು ನನ್ನ ಎದೆಯನ್ನು ಕರಗುವಂತೆ ಮಾಡಿದವು; ನಿನ್ನನ್ನು ಅಗಲಲು ನನ್ನನ್ನು ಪ್ರೇರಿಸಿದವು!

ನಿನ್ನ ತಾಯಿಗೆ ನೀನಲ್ಲದೆ ಬೇರೊಬ್ಬರಿಲ್ಲ. ಜಾತಿಯ ಆಚಾರಗಳನ್ನು ಮೀರಿ ನಡೆಯಲು ಅವರಿಗೆ ಧೈರ್ಯವಿಲ್ಲ. ಈ ಸಂದರ್ಭದಲ್ಲಿ ನಾನು ನಿನ್ನನ್ನು ಮದುವೆಯಾಗುವುದರಿಂದ ನೀನು ಅವರಿಂದ ಅಗಲಬೇಕಾಗಿ ಬರುತ್ತದೆ. ಅವರ ಎದೆಯಿಂದ ಸದಾ ಶೋಕಪೂರ್ಣ ಶ್ವಾಸಗಳು ಹೊರಬರಬಹುದು; ಕಂಬನಿ ಹರಿಸುತ್ತಾ ಅವರು ತಮ್ಮ ದಿನಗಳನ್ನು ಕಳೆಯಬಹುದು! ಇವನ್ನೆಲ್ಲಾ ನೆನೆಯುವಾಗ, ನಾನು ನನ್ನ ಸುಖಗಳನ್ನು ಪರಿತ್ಯಜಿಸಬೇಕೆಂದೆನಿಸಿತು. ನಾನು ನಿನ್ನನ್ನು ಹೃದಯಪೂರ್ವಕವಾಗಿ ಪ್ರೀತಿಸುತಿದ್ದರೂ ನಿನ್ನಿಂದ ದೂರಹೋಗಬೇಕೆಂದೆನಿಸಿತು. ಆದುದರಿಂದ ಬಾಲ, ನೀನು ನನ್ನನ್ನು ಮರೆತುಬಿಡು; ನಿನ್ನನ್ನು ನಿನ್ನ ತಾಯಿಯಿಂದ ಅಗಲಿಸಬಾರದೆಂದು ನಾನು ಸಂಕಲ್ಪಿಸಿದ್ದೇನೆ.

ಹೊರಟಿದ್ದೇನೆ ಬಾಲ; ನಿನ್ನಿಂದ ದೂರ ತೆರಳಲು ಹೊರಟಿದ್ದೇನೆ. ನಿನ್ನೊಡನೆ ಕಳೆದ ಆ ದಿನಗಳ ನೆನಪುಗಳು ನನ್ನ ಮನಸ್ಸಿನಲ್ಲಿ ಉಳಿದಿವೆ. ಕಳೆದ ದಿನಗಳ ಆ ಚೆಲವುಚಿತ್ರಗಳನ್ನು ನೋಡಿ ತುಸ ಸಂತಸವನ್ನುಣ್ಣ ಬೇಕೆಂದಿದ್ದೇನೆ. ಇರುಳು ಕವಿದ ಮುಂದಿನ ಬಾಳಿನಲ್ಲಿ ಈ ಚೆಲುವು ಚಿಕ್ಕೆಗಳನ್ನು ನೋಡಿ ತುಸ ಹರುಷವನ್ನುಣ್ಣುವೆನು. ಬಾಲ, ನಿನ್ನ ಬಿಂಬ ವನ್ನು ಮನದಲ್ಲಿ ಸಂಕಲ್ಪಿಸಿಕೊಂಡು ಅದನ್ನು ನೋಡುವುದರಿಂದ ಆನಂದವನ್ನು ಸವಿಯುವೆ!

ಹೆಚ್ಚಿಗೇನೂ ಬರೆಯುವುದಿಲ್ಲ. ನಿನ್ನ ಉಂಗುರವು ನನ್ನ ಬಳಿ ಯಲ್ಲಿಯೇ ಇದೆ. ನಮ್ಮಿಬ್ಬರ ಪ್ರೇಮದ ಗುರುತದೆಂದು ನಾನು ಅದನ್ನು ಜೋಪಾನ ಮಾಡಿರುವೆ. ಅದನ್ನು ನೋಡುವಾಗ ನಿನ್ನ ಸ್ಮರಣೆ ನನ್ನ ಚಿತ್ತದಲ್ಲಿ ಉದಯಿಸುವುದು. ನಿನ್ನೊಡನೆ ಕಳೆದ ದಿನಗಳ ಮಧುರಸ್ಮರಣೆ ಗಾಗಿ ಅದು ನನ್ನ ಬಳಿಯಲ್ಲಿರಲಿ.

ಬಾಲ ಸಿಟ್ಟಾಗಬೇಡ ಈ ಕಾಗದವು ನಿನಗೆ ನೋವನ್ನುಂಟುಮಾಡಿ ದರೂ ನಿನ್ನ ತಾಯಿಗಾಗಿ,-ನಿನಗೆ ಸ್ನೇಹಮಮತೆಗಳ ಸಿಹಿನೀರನ್ನು ಕುಡಿಸಿದ ಅಪ್ಪನಿಗಾಗಿ,-ಈ ನೋವನ್ನು ಸಹಿಸುವಿಯೆಂದು ನನ್ನ ನಂಬಿಕೆಯಾಗಿದೆ.

ನಿನ್ನ

**ಲಿಲ್ಲೀ**

ಬಾಲ ಕಾಗದವನ್ನು ಓದಿ ಮುಗಿಸಿದ; ಅವನ ಮನಸ್ಸನ್ನು ಕಾರಿ ರುಳು ಕವಿದಂತಾಯಿತು. ವದನವು ಮ್ಲಾನತೆಯನ್ನು ಹೊಂದಿತು. ಶೂನ್ಯತೆಯೇ ಅವನ ಮುಂದೆ ಬಂದು ನಿಂತಂತಾಯಿತು. ಅವನು ಈಜೀಚೇರಿನಲ್ಲಿ ಹಾಗೆಯೇ ಬಿದ್ದುಕೊಂಡು ಕಾಗದವನ್ನು ಪುನಃ ಓದತೊಡಗಿದ.

* * * *

'ಬಾಲ, ಬಾ ಊಟಕ್ಕಾಗಿದೆ.' ಅಡಿಗೆ ಕೋಣೆಯಿಂದ ಅಪ್ಪ ಕೂಗುವದು ಬಾಲನಿಗೆ ಕೇಳಿಸಿತು.

